# ಲಂಕೇಶರ ಕಥನ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಸಮಾಜ

*ಹಂಪಿ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ*


ಸಂಶೋಧನಾ ವಿದ್ಯಾರ್ಥಿ

**ರವಿಕುಮಾರ ಎಂ.**

*ಎಂ.ಎ., ಬಿ.ಎಡ್.,*

ಮಾರ್ಗದರ್ಶಕರು :

**ಡಾ. ಮಮತ ಜಿ. ಸಾಗರ್**

*ಎಂ.ಎ., ಪಿಎಚ್.ಡಿ.,*

ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ

ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು-೫೬೦ ೦೫೬



**ಕಾವ್ಯ ಮಂಡಲ**

೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,

ಬೆಂಗಳೂರು ೫೬೦ ೦೦೪.

(ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.)

೨೦೦೮




# ಲಂಕೇಶರ ಕಥನ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಸಮಾಜ

*ಹಂಪಿ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ*


ಸಂಶೋಧನಾ ವಿದ್ಯಾರ್ಥಿ

**ರವಿಕುಮಾರ ಎಂ.**

*ಎಂ.ಎ., ಬಿ.ಎಡ್.,*






ಮಾರ್ಗದರ್ಶಕರು :

**ಡಾ. ಮಮತ ಜಿ. ಸಾಗರ್**

*ಎಂ.ಎ., ಪಿಎಚ್.ಡಿ.,*

ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ

ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ, ಬೆಂಗಳೂರು-೫೬೦ ೦೫೬



**ಕಾವ್ಯ ಮಂಡಲ**

೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,

ಬೆಂಗಳೂರು ೫೬೦ ೦೦೪.

(ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.)

೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

**ರವಿಕುಮಾರ ಎಂ.** ಇವರು **"ಲಂಕೇಶರ ಕಥನ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಸಮಾಜ"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು

**ಡಾ. ಮಮತ ಜಿ. ಸಾಗರ್**
ಅಧ್ಯಾಪಕರು, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ,
ಬೆಂಗಳೂರು–೫೬೦ ೦೫೬

ದಿನಾಂಕ : 22/9/2008
ಸ್ಥಳ : ಬೆಂಗಳೂರು

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/ಲ೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು–೫೬೦ ೦೦೪.

# ದೃಢೀಕರಣ ಪತ್ರ

**"ಲಂಕೇಶರ ಕಥನ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಸಮಾಜ"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು **ಡಾ. ಮಮತ ಜಿ. ಸಾಗರ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 22/09/08.
ಸ್ಥಳ : ಬೆಂಗಳೂರು

Ravikumara M
ಸಂಶೋಧಕ
**(ರವಿಕುಮಾರ ಎಂ.)**

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು–೫೬೦ ೦೦೪.

# ಪರಿವಿಡಿ

# ಅಧ್ಯಾಯ–೧

# ಪೀಠಿಕೆ, ಉದ್ದೇಶ ಮತ್ತು ವ್ಯಾಪ್ತಿ

## ೧.೧ ಪೀಠಿಕೆ :

ಕಥೆಗಳು ಜನಜೀವನದ ಜೀವನಾಡಿಗಳು. ಇಲ್ಲಿ ಸಮಾಜದ ಎಲ್ಲಾ ಮಜಲುಗಳನ್ನು ಕಾಣಬಹುದು. ಕಥನ ಸಾಹಿತ್ಯ ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಬಹುಮುಖ್ಯ ಸ್ಥಾನವನ್ನು ಪಡೆದಿದೆ. "ಬುದ್ಧಿಭಾವಗಳ ವಿದ್ಯುದಾಲಿಂಗನವೇ ಸಾಹಿತ್ಯ" ಎಂಬ ಕುವೆಂಪುರವರ ಮಾತು ಮೂಲತಃ ಕಾವ್ಯವನ್ನು ಕುರಿತಾದಾಗಿದೆ. ಇದನ್ನು ಕಥಾ ಸಾಹಿತ್ಯಕ್ಕೂ ಅಳವಡಿಸಿಕೊಂಡು ನೋಡಬಹುದು. ಕಥೆಗಳಲ್ಲಿ ಬರುವ ಪಾತ್ರಗಳು ಕಥೆಗಾರನ ಸ್ವಂತ ಸೃಷ್ಟಿಯಲ್ಲ, ಬದಲಿಗೆ ನಮ್ಮ ಸುತ್ತಮುತ್ತಲಿನಲ್ಲಿ ಓಡಾಡುವ ಜನರು, ಸಮಾಜವನ್ನೇ ಹೋಲುವಂತಿರುತ್ತವೆ. ನಮ್ಮ ಜೀವನ ಶೈಲಿಯನ್ನು ಕಥೆಗಳಲ್ಲಿ ನೋಡಬಹುದು. ಆದ್ದರಿಂದಲೇ ಕಥೆಗಳು ಪ್ರಸ್ತುತವನ್ನು ಬಿಂಬಿಸುವ ವಾಸ್ತವ ಸತ್ಯಗಳನ್ನು ಸಾಕ್ಷತ್ಕರಿಸುವ ಸಾರ್ವಕಾಲಿಕ ಸತ್ಯಗಳನ್ನು ಹೊರಗೆಡುವ ಮತ್ತು ಪ್ರತಿಯೊಬ್ಬರ ಜೀವನದ ಶೈಲಿಯನ್ನು ಹೊರಹೊಮ್ಮಿಸುವ ಚಮತ್ಕಾರವನ್ನು ಹೊಂದಿರುತ್ತದೆ.

ನವ್ಯಕಾಲದ ಕಥೆಗಾರರ ದೃಷ್ಟಿಯಲ್ಲಿ ನೈತಿಕ, ಧಾರ್ಮಿಕ, ಆಧ್ಯಾತ್ಮಿಕ ನಂಬಿಕೆ, ಮೌಲ್ಯಗಳು ವ್ಯಕ್ತಿಯ ಸಂಸ್ಕಾರ ಜನ್ಯಸತ್ಯಗಳಾದವು. ಲಂಕೇಶರು ಇದಕ್ಕೆ ಹೊರತಾದವರಲ್ಲ. ನವ್ಯ ಕಥಾಮಾರ್ಗದ ಪ್ರಮುಖ ಲೇಖಕರಲ್ಲಿ ಒಬ್ಬರು. "ನವ್ಯಕತೆ ಹೇಗೆ ನವ್ಯ?" ಎಂದು ವಿವರಿಸಿದಂಥವರು. ಅಂದರೆ ಅದೇ ಕಾಲಕ್ಕೆ ಅವರ ನವ್ಯ ಸಾಹಿತ್ಯ ಒಳಗೊಳ್ಳುವ ವಲಯದ ಬಗ್ಗೆಯೂ ಚಿಂತಿಸಿದರು.

ನವ್ಯ ಬರಹಗಾರರ ಬರವಣಿಗೆಗಳಲ್ಲಿ ಪ್ರಬಲವಾಗಿ ಅಸ್ತಿತ್ವವಾದದ ಪ್ರಭಾವ ಕಂಡುಬರುವ ಹಾಗೆ ಲಂಕೇಶರ ಕಥೆಗಳಲ್ಲೂ ಅಸ್ತಿತ್ವವಾದದ ಪ್ರಭಾವವನ್ನು ದಟ್ಟವಾಗಿ ಕಾಣಬಹುದು. ನವ್ಯಕತೆಯ ಪ್ರಾತಿನಿಧಿಕತೆ ಹಾಗೂ ವೈವಿಧ್ಯತೆಗೆ ಇವರು ನೀಡಿರುವ ಸ್ವಂತಿಕೆಯ, ಪ್ರತ್ಯೇಕತೆಯ ಛಾಪು ವಿಶಿಷ್ಟವಾದದ್ದು. ಇವರ ಕಥೆಗಳ ವಸ್ತು, ಭಾಷೆ, ನಿರ್ವಹಣೆಯಲ್ಲಿ ತೀವ್ರತೆಯನ್ನು ಕಾಣಬಹುದು. ಸಂಕ್ಷಿಪ್ತತೆ, ಸೂಕ್ಷ್ಮತೆ, ಸಂಕೀರ್ಣತೆ ಇವರ

ಕಥೆಗಳ ಮುಖ್ಯ ಲಕ್ಷಣಗಳಾಗಿವೆ. ಮಾನವನ ಮೂಲಭೂತ ಪ್ರವೃತ್ತಿಗಳಾದ ಸಣ್ಣತನ, ಅವಮಾನ, ಅಸಹಾಯಕತೆ, ದಿಗ್ಭ್ರಮೆ, ಸಾಮಾಜಿಕ ತಿಳುವಳಿಕೆ ಮೊದಲಾದವುಗಳನ್ನು ಶೋಧಿಸುವಲ್ಲಿ ಇವರ ಕಥೆಗಳು ಯಶಸ್ವಿಯಾಗಿವೆ. ಇಷ್ಟೇ ಅಲ್ಲದೇ ಮಾನವ ಸಂಬಂಧಗಳಲ್ಲಿ ಪ್ರೀತಿ, ಸ್ನೇಹ, ಮಮತೆ, ದ್ವೇಷ, ಅಸೂಯೆ, ಮುಗ್ಧತೆ, ಕಾಮಪ್ರವೃತ್ತಿ ಮುಂತಾದ ಮೌಲ್ಯಗಳನ್ನು ಲಂಕೇಶರ ಕಥೆಗಳು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸುತ್ತವೆ.

ಲಂಕೇಶರ ಕಥೆಗಳು ಮನುಷ್ಯನ ಖಾಸಗೀ ಕ್ರಿಯೆಗಳ ಸಾಮಾಜಿಕತೆಯನ್ನು ಶೋಧಿಸುತ್ತದೆ. ಸಮಾಜದಲ್ಲಿರುವ ಅನುಭವಗಳ ಮೌಲ್ಯ ಸಂಬಂಧಗಳನ್ನು ಕಥೆಗಳಲ್ಲಿ ಬರುವ ವಿವಿಧ ಪಾತ್ರಗಳು ತಿಳಿಸುತ್ತವೆ. ಲಂಕೇಶರ ಕಥಾ ಸಾಹಿತ್ಯದ ಒತ್ತು ಇರುವುದು ಮನುಷ್ಯನ ಅನುಭವದ ವೈಯಕ್ತಿಕ ಅಂಶಗಳ ಮೇಲೆ ಎಂಬುದು ವಿವಿಧ ಕಥೆಗಳಲ್ಲಿನ ಹಲವು ರೀತಿಯ ಪಾತ್ರಗಳನ್ನಿಟ್ಟುಕೊಂಡು ನೋಡಿದಾಗ ಅರ್ಥವಾಗುತ್ತದೆ. ಬದುಕು ಸಿದ್ಧಾಂತಗಳನ್ನು ಮೀರಿ ಬೆಳೆಯುತ್ತದೆ ಎಂಬುದು ಕಥೆಗಳ ಮೂಲಕ ಗೋಚರಿಸುವ ವಿಷಯವಾಗಿದೆ. ಅವರ ಕಥೆಗಳಲ್ಲಿ ಬರುವ ವ್ಯಕ್ತಿ ಮತ್ತು ಸಮಾಜಗಳು ವಿಮರ್ಶಾತ್ಮಕ ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಸಮಾಜ ಹೇಗಿರಬೇಕು ಎಂಬ ಕನಸನ್ನು ಕಾಣಲು ವ್ಯಕ್ತಿಗಳಿಗೆ ಮುನ್ನುಡಿಯನ್ನು ಹಾಕಿಕೊಡುವ ಕಥೆಗಳು, ಪರಂಪರೆಗೂ ವ್ಯಕ್ತಿಗೂ ಇರುವ ನಂಟನ್ನು ಹೇಳುವುದರೊಂದಿಗೆ ಪರಂಪರೆಯನ್ನು ಮೀರುವ ಪ್ರಯತ್ನವನ್ನು ಕಥೆಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಆದ್ದರಿಂದ ಲಂಕೇಶರ ಕಥೆಗಳು ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಮುಖ್ಯವಾಗಿ ಕಂಡುಬರುತ್ತದೆ.

"ಭಾವನೆಗಳ ಅತೀ ಸೂಕ್ಷ್ಮತೆ ಮತ್ತು ಭಾಷೆಯ ಜೀವಂತಿಕೆಯನ್ನು ದುಡಿಸಿಕೊಳ್ಳುವ ಕಲೆ ಲಂಕೇಶರಿಗೆ ಸಿದ್ಧಿಸಿದೆ"[೧] ಬದುಕನ್ನು ಅಂತರಂಗದಿಂದ ನೋಡುವ ಮತ್ತು ತೀವ್ರವಾಗಿ ಬದುಕುವ ಕ್ರಿಯೆಯಲ್ಲಿ ಸಾಕ್ಷಿ ಪ್ರಜ್ಞೆಯನ್ನು ಒಳಗೊಳ್ಳುವ ದೃಷ್ಟಿ ಅವರ ಕಥೆಗಳಲ್ಲಿದೆ. ವ್ಯಂಗ್ಯ ಲಂಕೇಶರ ಅಭಿವ್ಯಕ್ತಿ ಮಾಧ್ಯಮದ ವೈಶಿಷ್ಟ್ಯ ಮಾನವ ಅನುಭವದ ಸಂದಿಗ್ಧತೆಯನ್ನು, ಸಂಕೀರ್ಣತೆಯನ್ನು ಶೋಧಿಸುವ ಇವರ ಕಥೆಗಳು ವ್ಯಂಗ್ಯವನ್ನು ಒಳಗೊಂಡಂತೆ ಸಿನಿಕರಹಿತ ಗಾಂಭೀರ್ಯವನ್ನು ಹೊಂದಿವೆ.

---

[೧] "ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ", ಅಮೂರ, ಜಿ.ಎಸ್., ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩, ಪು.೨೪೭–೨೭೪.

ಸಾಹಿತ್ಯವನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿದ ಕನ್ನಡದ ಲೇಖಕರಲ್ಲಿ ಲಂಕೇಶರು ಮೊದಲ ಸಾಲಿಗೆ ಸೇರಿದವರು. ಲಂಕೇಶರದು ಬಹುಮುಖ ಪ್ರತಿಭೆ. ಜೀವನದ ವಿವಿಧ ಕ್ಷೇತ್ರಗಳಲ್ಲಿ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಅವರಷ್ಟು ಲವಲವಿಕೆಯಿಂದ ತೊಡಗಿಸಿಕೊಂಡವರು ವಿರಳ.

ಶಿಕ್ಷಣ, ಪತ್ರಿಕೋದ್ಯಮ, ಬೇಸಾಯ, ರಾಜಕೀಯ ಇಂಥ ಹಲವಾರು ಕ್ಷೇತ್ರಗಳಲ್ಲಿ ಅವರ ದುಡಿಮೆ ಅಪಾರ. ಅದೇ ರೀತಿ ಕಾವ್ಯ, ನಾಟಕ, ಕಥೆ, ಕಾದಂಬರಿ, ವಿಮರ್ಶೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಇವರ ಸಾಧನೆ ಇದೆ.

ಲಂಕೇಶ್ ಕನ್ನಡ ಸಾಹಿತ್ಯ ಕಂಡ ಪ್ರತಿಭಾನ್ವಿತ ಕವಿ/ಲೇಖಕ. ಇವರು ನವ್ಯಸಾಹಿತ್ಯ ಘಟ್ಟದಲ್ಲಿ ವಿಸ್ಮಯ ರಚನೆಗಳನ್ನು ಹುಟ್ಟುಹಾಕಿದವರು. ಇಲ್ಲಿಯವರೆಗೂ ಇದ್ದ ಸಾಮಾಜಿಕ ಪರಂಪರೆಯ ಮೌಲ್ಯಗಳನ್ನು ಪ್ರಶ್ನಿಸಿದವರು. ಇವರು ಕಥೆ, ಕಾದಂಬರಿ, ನಾಟಕ, ಕಾವ್ಯ ಹೀಗೆ ಹಲವು ಸಾಹಿತ್ಯದ ಪ್ರಕಾರಗಳಲ್ಲಿ ಬರವಣಿಗೆಯನ್ನು ಕೇಂದ್ರೀಕರಿಸಿದ್ದಾರೆ. ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಮುಸ್ಸಂಜೆಯ ಕಥಾಪ್ರಸಂಗ, ಬಿರುಕು, ಗುಣಮುಖ ಮುಂತಾದ ಕಾದಂಬರಿಗಳನ್ನು ಸಂಕ್ರಾಂತಿ, ತೆರೆಗಳು ಎಂಬ ನಾಟಕಗಳನ್ನು ಹಲವಾರು ಸಣ್ಣಕಥೆಗಳನ್ನು ವಿಮರ್ಶಾ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಈ ಎಲ್ಲಾ ಕೃತಿಗಳಲ್ಲೂ ಬದಲಾವಣೆಯನ್ನು ಬಯಸುವ ಹಂಬಲವಿದೆ.

೬೦ರ ದಶಕದಿಂದ ೨೦೦೦ದ ದಶಕದವರೆಗೆ ಕನ್ನಡ ಸಾಹಿತ್ಯದಲ್ಲಿ ಅಸ್ತಿತ್ವವನ್ನು ಮೆರೆದಿದ್ದ ಲಂಕೇಶರ ಕಥನ ಸಾಹಿತ್ಯದ ಬರಹ ಎರಡು ಮುಖ್ಯ ಕಾರಣಗಳಿಂದಾಗಿ ಮಹತ್ವದ್ದಾಗುತ್ತದೆ. ಮೊದಲನೆಯದು ಮಹತ್ವಾಕಾಂಕ್ಷೆಯ ಎಲ್ಲಾ ಸೆಳೆತಗಳನ್ನು ಬಿಟ್ಟುಕೊಟ್ಟು ಅವರು ತಮ್ಮ ನೈಜ ಪರಿಸರಕ್ಕೆ ಎಂದರೆ ತಮ್ಮ ಜನತೆಯ ಜೀವನಕ್ಕೆ ಬದ್ಧರಾದದ್ದು, ಎರಡನೆಯದು ಅವರ ಶುದ್ಧ ಸಮಕಾಲೀನ ದೃಷ್ಟಿ. ಬೌದ್ಧಿಕವಾಗಿ ಆಕರ್ಷಕವೆನಿಸುವ ತಾತ್ವಿಕ ಪ್ರಶ್ನೆಗಳಲ್ಲಿ, ಐತಿಹಾಸಿಕ ಅನ್ವೇಷಣೆಯ ಮರಳು ಹಾದಿಯಲ್ಲಿ ಸಿಕ್ಕಿ ಹಾಕಿಕೊಳ್ಳದೇ ಜನ ಇಂದು ಎದುರಿಸುತ್ತಿರುವ ವಾಸ್ತವ ಸಮಸ್ಯೆಗಳತ್ತ ಅವರ ಗಮನ ಕೇಂದ್ರಿತವಾದದ್ದು. ಒಬ್ಬ ನಿಜವಾದ ಸಾಹಿತಿಯಲ್ಲಿರಬೇಕಾದ ಎಲ್ಲಾ ಗುಣಗಳು ಲಂಕೇಶರಲ್ಲಿದ್ದವು. ಪರಿಸರಕ್ಕೆ ಸ್ಪಂದಿಸುವ ಸಾಮರ್ಥ್ಯ, ಅನುಭವ ಹಾಗೂ ಭಾಷೆಗಳ ಬಗ್ಗೆ ಎಚ್ಚರ ಒಳ ಅರಿವು, ಸಹಜ ಜ್ಞಾನ, ಮುಗ್ಧತೆ– ಇವುಗಳೆಲ್ಲಾ ಲಂಕೇಶರ ಕಥೆಗಳಲ್ಲಿ ಹರಡಿಕೊಂಡಿರುವುದನ್ನು ಕಾಣಬಹುದು.

ಸಣ್ಣಕಥೆ ಲಂಕೇಶರ ಪ್ರಮುಖ ಮಾಧ್ಯಮಗಳಲ್ಲೊಂದಾಗಿತ್ತು. ಅವರ ಪ್ರಥಮ ಕಥಾ ಸಂಕಲನ "ಕೆರೆಯ ನೀರನು ಕೆರೆಗೆ ಚೆಲ್ಲಿ" ೧೯೬೩ರಲ್ಲಿ ಪ್ರಕಟವಾಯಿತು. ನಂತರದ ವರ್ಷಗಳಲ್ಲಿ ೧೯೭೦ರಲ್ಲಿ "ನಾನಲ್ಲ" ೧೯೭೩ರಲ್ಲಿ "ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ" ೧೯೯೦ರಲ್ಲಿ "ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು" ಹಾಗೂ ೧೯೯೭ರಲ್ಲಿ "ಉಲ್ಲಂಘನೆ ಮತ್ತು ಇತರ ಕಥೆಗಳು" ಹೀಗೆ ಇನ್ನೂ ನಾಲ್ಕು ಸಂಗ್ರಹಗಳು ಹೊರಬಂದಿವೆ. ೧೯೯೭ರಲ್ಲಿ ಪ್ರಕಟವಾದ "ಸಮಗ್ರ ಕಥೆಗಳು" ಮೇಲಿನ ಎಲ್ಲಾ ಸಂಗ್ರಹಗಳನ್ನೊಳಗೊಂಡಿದೆ. ತಮ್ಮ ಸಣ್ಣಕಥೆಗಳಲ್ಲಿ ಲಂಕೇಶರು ಎರಡು ಗುಣಗಳತ್ತ ವಿಶೇಷವಾಗಿ ಗಮನ ಹರಿಸಿದರು.

ಮೊದಲನೆಯದು ವಸ್ತುನಿಷ್ಠತೆ "ನನ್ನ ಕಥೆಗಳು ನನ್ನಿಂದ ಹೆಚ್ಚು ಹೆಚ್ಚು ಮುಕ್ತವಾಗಿರಬೇಕು. ಜೀವನದ ಮರ್ಜಿಗಳಿಂದ ತಮ್ಮ ರೂಪ ನಿರ್ವಹಿಸಿಕೊಳ್ಳುವಂತಾಗಬೇಕು (ಲಂಕೇಶ, ೧೯೯೨ : ಮುನ್ನುಡಿ) ಎರಡನೆಯದು ಅನುಭವದ ಸಾಮಾನ್ಯತೆ "ಯಾವುದೇ ಒಂದು ಅರ್ಥಪೂರ್ಣ ಕೃತಿ ಕೇವಲ ಒಬ್ಬ ಲೇಖಕನ ವೈಯುಕ್ತಿಕ ಶ್ರಮದಿಂದ ಸಾಧ್ಯವಾಗುವುದಿಲ್ಲ. ಆ ಲೇಖಕ ಒಂದು ಗುಂಪಿನ ಒಂದು ಅನುಭವದ ಸಾಮಾನ್ಯತೆ ಹೊಂದಿದ ಜನಾಂಗದ ಅಂಗವಾಗಿದ್ದಾಗ ಮಾತ್ರ ಅಂತಹ ಕೃತಿ ಸಾಧ್ಯವಾಗುತ್ತದೆ"[೨] (ಲಂಕೇಶ: ೧೯೯೨, ಮುನ್ನುಡಿ).

ಲಂಕೇಶರ ಕಥೆಗಳಲ್ಲಿ ನವ್ಯ ಸಾಹಿತ್ಯದ ಸಂದರ್ಭದ ವ್ಯಕ್ತಿವಾದಿ ನಿಲುವುಗಳು ಮತ್ತು ತಾತ್ವಿಕ ಬೆಳವಣಿಗೆಯ ನೆಲೆಗಳು ವಿಸ್ತಾರವಾಗಿ ಹರಡಿವೆ. ಪ್ರಸ್ತುತ ಅಧ್ಯಯನವು ಮೂಲತಃ ವಸ್ತುಕೇಂದ್ರಿತ ಅಧ್ಯಯನವಾಗಿರುತ್ತದೆ. ಲಂಕೇಶರ ಕಥೆಗಳು ನವ್ಯ ಸಾಹಿತ್ಯದ ಪ್ರಮುಖ ಮೌಲ್ಯಗಳ ಬೆಳಕಿನಲ್ಲಿಯೇ ಅನುಭವಗಳನ್ನು, ಆಲೋಚನೆಗಳನ್ನು ದಾಖಲಿಸಲು ಮುಂದಾಗಿವೆ. ವ್ಯಕ್ತಿ ಅನುಭವಗಳನ್ನು ಸುತ್ತಲಿನ ಪರಿಸರಕ್ಕೆ ಪ್ರತಿಕ್ರಿಯಿಸುವ ವಿಧಾನವು ಕಥೆಗಳಲ್ಲಿ ಸಾಮಾನ್ಯವಾಗಿದ್ದರೂ ಆಂತರಿಕ ವರ್ತನೆಯ ವಿವರಗಳು ವಿಶೇಷವಾಗಿವೆ. ಲಂಕೇಶರ ಕಥನ ಬರವಣಿಗೆಗಳ ಮೂಲಕ ಸಮಾಜದಲ್ಲಿ ಉಂಟಾಗುತ್ತಿರುವ ಪಲ್ಲಟಗಳನ್ನು ಬದಲಾವಣೆಗಳನ್ನು ಬಯಸುವ ಹೊಸ ಮನಸ್ಸುಗಳನ್ನು ಹೊಸ ಅನಿಸಿಕೆ. ಐಡಿಯಾ, ನಂಬಿಕೆಗಳಿಗೆ ಕೈ ಚಾಚುತ್ತಿರುವ ವ್ಯಕ್ತಿಗಳನ್ನು ಈ ಸಂಪ್ರಬಂಧದಲ್ಲಿ ಗುರುತಿಸಲಾಗಿದೆ.

---

[೨] "ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ", ಅಮೂರ, ಜಿ.ಎಸ್., ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩, ಪು.೨೪೭-೨೭೪.

ಹಳ್ಳಿಗಳಲ್ಲಿ ಆಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಅವುಗಳ ಗುಣದೋಷಗಳೊಂದಿಗೆ ಲಂಕೇಶರ ಕೃತಿಗಳು ಹೇಗೆ ಗುರುತಿಸುತ್ತವೆ ಎಂಬುದನ್ನು ಕಥೆಗಳು ಹೇಳುತ್ತವೆ. ಅಲ್ಲದೇ ವಾಸ್ತವತೆಗೆ ಹತ್ತಿರವಾಗಿ ಈ ಕಥೆಗಳನ್ನು ಕಾಣಲಾಗಿದೆ. ಜೀವನದಲ್ಲಿ ಎದುರಿಸುವ ಪ್ರೀತಿ ಪ್ರೇಮಕ್ಕೆ ಹೊಸ ದಾರಿಯನ್ನು ತೋರಿಸುವ ಅತ್ಯುತ್ತಮ ಮಾರ್ಗಗಳಿಗೂ ಲಂಕೇಶರ ಕಥೆಗಳು ಉದಾಹರಣೆಗಳಾಗಿವೆ.

ಒಟ್ಟಾರೆ ಲಂಕೇಶರ ಕಥಾರಚನೆಯ ಆಯಾಮವು ವೈವಿಧ್ಯತೆಯಿಂದ ಕೂಡಿದೆ. ಜಾತಿ, ಗಂಡು–ಹೆಣ್ಣಿನ ಸಂಬಂಧಗಳಿಗೆ ಹೊಸ ಆಯಾಮಗಳನ್ನು ಕಥೆಗಳು ಒದಗಿಸಿಕೊಟ್ಟಿವೆ. ಸಾಮಾಜಿಕ ಪ್ರಜ್ಞೆಯನ್ನೊಳಗೊಂಡ ತೀವ್ರ ಅಭಿವ್ಯಕ್ತಿಯಿಂದ ಹಾಗೂ ಗಾಂಧಿವಾದದ ಸಾಂಸ್ಕೃತಿಕ ಕಾಳಜಿಗಳಿಂದ ಇವರ ಕಥೆಗಳು ವೈವಿಧ್ಯಮಯವಾಗಿ ವಿಭಿನ್ನವಾಗಿರುವುದನ್ನು ನೋಡಬಹುದು. ಸಮಾಜದ ರಾಜಕೀಯ ಹಾಗೂ ಸಾಮಾಜಿಕ ಕಳಕಳಿಯುಳ್ಳ ವಿವಿಧ ಸಮಕಾಲೀನ ಆಯಾಮಗಳನ್ನು ಸೆರೆಹಿಡಿಯುವುದರ ಜೊತೆಗೆ ಆ ಆಯಾಮಗಳಿಗೆ, ಆಗುಹೋಗುಗಳಿಗೆ ಪ್ರತಿಸ್ಪಂದಿಸುವ ವ್ಯಕ್ತಿಗಳ ವೈವಿಧ್ಯತೆಯನ್ನು ಸಹ ಲಂಕೇಶರ ಕಥೆಗಳು ಸೆರೆಹಿಡಿಯುತ್ತವೆ. ಹೀಗೆ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧಾಂತರಗಳನ್ನು ಲಂಕೇಶರ ಕಥೆಗಳು ಅದ್ಭುತವಾಗಿ ಚಿತ್ರಿಸುತ್ತವೆ.

## ೧.೨ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಲಂಕೇಶರ ಕಥನ ಸಾಹಿತ್ಯದಲ್ಲಿ ಪರಿವರ್ತನೆಯನ್ನು ಬಯಸುವ ವ್ಯಕ್ತಿಗಳು ಮತ್ತು ಸಮಾಜವನ್ನು ಗುರುತಿಸುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ. ಬಹುಮುಖ ಪ್ರತಿಭೆಯ ಲಂಕೇಶರ ರಚನೆಗಳನ್ನು ಕುರಿತು ಈಗಾಗಲೇ ಸೃಜನಶೀಲ ವಿಮರ್ಶೆಗಳು ನಡೆದಿವೆ. ಶತಮಾನದ ಸಾಹಿತ್ಯ ವಿಮರ್ಶೆ, ಕಥನ ಸಾಹಿತ್ಯ: ಸಣ್ಣಕತೆಗಳು ಮುಂತಾದ ಕೃತಿಗಳಲ್ಲಿ ಲಂಕೇಶರ ವಿವಿಧ ಕೃತಿಗಳ ವಿಮರ್ಶೆಗಳು ನಡೆದಿವೆ. ಈ ಎಲ್ಲಾ ವಿಮರ್ಶೆಗಳನ್ನು ನೋಡಿ ಈ ವಿಮರ್ಶೆಗಳಲ್ಲಿ ನೋಡಿದ ನೆಲೆಗಟ್ಟಿಗಿಂತಲೂ ವಿಭಿನ್ನವಾಗಿ ಯೋಚಿಸಲು ಈ ಅಧ್ಯಯನ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ಲಂಕೇಶರ ಕಥನಾ ಸಾಹಿತ್ಯವನ್ನು ಇಟ್ಟುಕೊಂಡು ವ್ಯಕ್ತಿ ಮತ್ತು ಸಮಾಜದ ವಿವಿಧ ದೃಷ್ಟಿಕೋನಗಳನ್ನು ನವೀನ ರೀತಿಯಿಂದ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಲಂಕೇಶರ ಕಥೆಗಳೆಲ್ಲವೂ ಒಂದಕ್ಕೊಂದು ಸಂಬಂಧ ಇರುವ ಹಾಗೆ ಕಾಣುತ್ತವೆ. ಏಕೆಂದರೆ, ಆ ಎಲ್ಲವೂ ಒಂದೇ ನಿರ್ದಿಷ್ಟ ಸಮಾಜದ ಆಗುಹೋಗುಗಳಿಗೆ ಪ್ರತಿಸ್ಪಂದಿಸುತ್ತಾ ಇರುತ್ತವೆ. ಆದ್ದರಿಂದ ಇಲ್ಲಿ ಬರುವ ವ್ಯಕ್ತಿಗಳು ಬೇರೆ ಬೇರೆಯಾದರೂ ಸಹ ಎಲ್ಲಾ ಪಾತ್ರಗಳು ಒಂದೇ ಪಾತ್ರದ ವಿವಿಧ ರೂಪಗಳು ಆಗಿರಲಿಕ್ಕೂ ಸಾಧ್ಯ! ಅದು ಗಂಡೇ ಇರಬಹುದು, ಹೆಣ್ಣೇ ಇರಬಹುದು, ಚಿಕ್ಕ ಊರಿನ ಬಡಪಾತ್ರವಿರಬಹುದು, ದೊಡ್ಡ ಊರಿನ ವಿದ್ಯಾವಂತನೇ ಇರಬಹುದು. ಒಂದು ರೀತಿಯಲ್ಲಿ ಈ ಎಲ್ಲಾ ಪಾತ್ರಗಳು ಲಂಕೇಶರ ಕಥಾ ವಲಯದಲ್ಲಿ ಬರುವಂತಹ ವ್ಯಕ್ತಿಯ ಹಲವು ವ್ಯಕ್ತಿತ್ವಗಳಂತೆ ಕಂಡುಬರುತ್ತವೆ.

ಲಂಕೇಶರ ರಚನೆಗಳಲ್ಲಿ ಕಂಡುಬರುವ ಬದಲಾವಣೆಯ ಪ್ರತಿಮೆಗಳೆಲ್ಲವೂ ಒಂದೇ ಅಂಶವನ್ನು ವಿವಿಧ ಆಯಾಮಗಳಲ್ಲಿ ಪ್ರತಿನಿಧಿಸುತ್ತವೆ.

ಲಂಕೇಶರ ಕಥೆಗಳಲ್ಲಿ ಹಳ್ಳಿ ಮತ್ತು ಪಟ್ಟಣಗಳ ನಡುವೆ ವ್ಯಕ್ತಿಗಳು ಸಿಕ್ಕಿ ಹೇಗೆ ಒದ್ದಾಡುತ್ತಿದ್ದಾರೆ ಎಂಬುದನ್ನು ಕಾಣಬಹುದು. ಬದಲಾಗಿ ಗ್ರಾಮೀಣ ಸಮಾಜದಲ್ಲಿ ಉಂಟಾಗಿರುವ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಸೃಷ್ಟಿಸುತ್ತಿರುವ ಹೊಸ ವ್ಯಕ್ತಿಗಳನ್ನು, ಕಥೆಗಳನ್ನು ಇಟ್ಟುಕೊಂಡು ಹೇಳಲಾಗಿದೆ. ವ್ಯಕ್ತಿಯನ್ನು ಪಟ್ಟಣದ ಸಂಪರ್ಕಕ್ಕೆ ತಂದಿರುವುದು ವಿದ್ಯಾಭ್ಯಾಸ. ಈ ವಿದ್ಯಾಭ್ಯಾಸ ಎನ್ನುವುದು ಅನೇಕ ಸಂಕೀರ್ಣವಾದ ಅನುಭವಲೋಕಗಳಿಗೆ ಈ ಹೊಸ ಪ್ರಜ್ಞೆ ನಾಯಕನನ್ನು ಪರಿಚಯಿಸುತ್ತದೆ. ಈ ಹೊಸಪ್ರಜ್ಞೆ ನಾಯಕ ಇತ್ತ ಪೂರ್ಣವಾಗಿ ಹಳ್ಳಿಗನೂ ಅಲ್ಲ, ಅತ್ತ ಪೂರ್ಣವಾಗಿ ಪಟ್ಟಣಿಗನೂ ಅಲ್ಲ, ಇಂತಹ ವ್ಯಕ್ತಿ ಮತ್ತು ಅವನು ವಾಸಿಸುವ ಸಮಾಜದ ಸಂವೇದನೆಗಳನ್ನು ಲಂಕೇಶರ ಕಥೆಗಳು ವ್ಯಕ್ತಪಡಿಸುತ್ತವೆ. ಈ ಅಂಶಗಳನ್ನು ಇಟ್ಟುಕೊಂಡು ಅಧ್ಯಯನ ಮಾಡಲು ಯತ್ನಿಸಲಾಗಿದೆ. ವ್ಯಕ್ತಿ ಮತ್ತು ಸಮಾಜಗಳ ಸಂಬಂಧಗಳನ್ನು ವಿವರಿಸಲು ಲಂಕೇಶರ ಎಲ್ಲಾ ಕಥೆಗಳನ್ನು ತೆಗೆದುಕೊಳ್ಳುವುದು ಕಷ್ಟ ಸಾಧ್ಯ. ಎಲ್ಲಾ ಬಗೆಯ ಕಥೆಗಳು ಒಂದೇ ರೀತಿಯ ಭಾವನೆಗಳನ್ನು ವ್ಯಕ್ತಪಡಿಸುವುದರಿಂದ ಅವರ ಕಥೆಗಳಲ್ಲಿ ಪ್ರಮುಖವಾದ ೧೦ ಕಥೆಗಳನ್ನು ಪ್ರಾತಿನಿಧಿಕವಾಗಿ ತೆಗೆದುಕೊಂಡು ವಿಷಯದ ವ್ಯಾಪ್ತಿ ನೀಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ವ್ಯಕ್ತಿಗಳ ವಿವಿಧ ಬಗೆಯ ಆಲೋಚನೆಗಳು ಮತ್ತು ಅವರ ಕಟ್ಟಬಯಸುವ ಸಮಾಜವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಬದಲಾದ ಸಮಾಜದ ಗರ್ಭದಲ್ಲಿ ಉಂಟಾಗಿರುವ ಸಾಮಾಜಿಕ ಬದಲಾವಣೆ ಪ್ರಕ್ರಿಯೆಗಳು ಸೃಷ್ಟಿಸುತ್ತಿರುವ ಹೊಸ ವ್ಯಕ್ತಿಗಳಲ್ಲಿ ಉಮಾಪತಿ ಹೊರತಲ್ಲ ಆಧುನಿಕತೆಯನ್ನು ಬಯಸುವ ಸೆನ್ಸಿಟಿವ್ ವ್ಯಕ್ತಿ ಉಮಾಪತಿ. ಇದಾವುದರ ಪರಿವೆಯೇ ಇಲ್ಲದೇ ಬದುಕನ್ನು ಸಹಜ ಮತ್ತು ಅನಿವಾರ್ಯವೆಂಬಂತೆ ಸ್ವೀಕರಿಸುವ ಅವಿದ್ಯಾವಂತ ಹಳ್ಳಿಗರಾದ ಉಮಾಪತಿಯ ತಾಯಿ ಮತ್ತು ಅಕ್ಕ ಲಿಂಗಿ, ಇದರ ಮಧ್ಯೆ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯ ಮಧ್ಯೆ ತೊಳಲಾಡುವ ನಿಂಗೇಗೌಡ ಈ ಪಾತ್ರಗಳ ನಡುವೆ ನಡೆಯುವ ಜಂಜಾಟಗಳು **'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'** ಕಥೆಯಲ್ಲಿ ಹೇಗೆ ವ್ಯಕ್ತಗೊಂಡಿವೆ ಎಂಬ ಹಿನ್ನೆಲೆಯಲ್ಲಿ ಕಥೆಯನ್ನು ನೋಡುವ ಯತ್ನ ಮಾಡಲಾಗಿದೆ.

**'ಕಲ್ಲು ಕರಗುವ ಸಮಯ'** ಕಥೆಯಲ್ಲಿ ಬರುವ ಶ್ಯಾಮಲ ಆಧುನಿಕ ಸ್ತ್ರೀ. ಆದರೆ ಅವಳು ತಿಪ್ಪಣ್ಣನನ್ನು ಮೋಹಿಸಿ ಪ್ರೀತಿಗೆ ಹೊಸ ಹಾದಿಯನ್ನು ಹುಡುಕುವುದರೊಂದಿಗೆ ಆಧುನಿಕ ಸಮಾಜಕ್ಕೆ ನಾಂದಿ ಹಾಡುತ್ತಾಳೆ. ಇದನ್ನು ವಿರೋಧಿಸುವ ಶ್ಯಾಮಲಾಳ ತಂದೆ ಕೊನೆಗೆ ಸೋಲುತ್ತಾನೆ. ಹೊಸತು–ಹಳತು ಸಂಘರ್ಷದ ಹಾದಿಯಲ್ಲಿ ಶ್ಯಾಮಲ–ಮಲ್ಲಯ್ಯ ಕಂಡು ಬರುತ್ತಾರೆ. ಶ್ಯಾಮಲ ತಿಪ್ಪಣ್ಣನನ್ನು ಮದುವೆಯಾಗುವುದರೊಂದಿಗೆ ವಾಸ್ತವತೆ ಮತ್ತು ಜೀವನ ಪ್ರೀತಿಯ ಹೊಸದಾರಿ ತೋರಿಸುತ್ತಾರೆ. ಇಲ್ಲಿನ ವ್ಯಕ್ತಿಗಳು ಮತ್ತು ಸಮಾಜ ವಿಶಿಷ್ಟ ರೀತಿಯಲ್ಲಿ ನಮಗೆ ಗೋಚರಿಸುತ್ತಾರೆ.

**'ಉರಿದ ಊರಿನವರು'** ಕಥೆಯಲ್ಲಿ ಬರುವ ವಿವಿಧ ರೂಪದ ವ್ಯಕ್ತಿಗಳಾದ ಬೈರಪ್ಪ ಮಾಸ್ಟರ್, ಚಿಕ್ಕಲಿಂಗ, ಕರಿಸಿದ್ಧ. ಸಾಮಾಜಿಕ ಕಟ್ಟಳೆಗಳನ್ನು ಮುರಿದು ಹೊಸ ಬದುಕಿಗಾಗಿ ಹಂಬಲಿಸುತ್ತಾರೆ. ಇವರೆಲ್ಲರೂ ಹಿಂಸೆಯ ನೆಲೆಯಲ್ಲಿ ಕಂಡುಬರುತ್ತಾರೆ. ಈ ಹಿಂಸೆಯನ್ನು ಪೊರೆಯುವ ಭ್ರಷ್ಟರ ನಡುವೆಯೂ ದಿಟ್ಟ ಹೆಣ್ಣಾಗಿ ಕಂಡುಬರುತ್ತಾಳೆ. ಹಿಂಸೆಯ ನೆಲೆಯಲ್ಲಿರುವ ವ್ಯಕ್ತಿಗಳು, ಹಿಂಸಿಸುವ ವ್ಯಕ್ತಿಗಳು ಕಟ್ಟುವ, ಕಟ್ಟಬಯಸುವ ಸಮಾಜವು ಈ ಕಥೆಯಲ್ಲಿ ವ್ಯಕ್ತಗೊಂಡಿದೆ.

**'ರೊಟ್ಟಿ'** ಲಂಕೇಶರು ಸಮಕಾಲೀನ ಸಮಸ್ಯೆಗೆ ಉತ್ಕಟವಾಗಿ ಸ್ಪಂದಿಸಿ ಬರೆದ ಕಥೆ. ಹಸಿವು, ಅಸಾಹಯಕತೆಗಳನ್ನು ನೂತನ ರೀತಿಯಲ್ಲಿ ಹೇಳಿದ್ದು ಲಂಕೇಶರ ಪ್ರತಿಭಾ ಶೈಲಿ ಗ್ರಾಮೀಣ ಪರಿಸರದಲ್ಲಿ ಹುಟ್ಟಿ ಬೆಳೆದ ಹೆಣ್ಣು ಪಟ್ಟಣ ಸಂಸ್ಕೃತಿಗೆ ಒಗ್ಗಿಕೊಳ್ಳಲು ವಿಫಲಳಾದ ದುರಂತವನ್ನು 'ರೊಟ್ಟಿ' ಕಥೆಯಲ್ಲಿ ನೋಡಬಹುದು.

**'ದೇವಿ'** ಕಥೆಯ ದೇವಿ ಐದನೇ ಕ್ಲಾಸ್ ಮಾತ್ರ ಓದಿರುವ ತೀರಾ ಸಾಮಾನ್ಯ ಹೆಂಗಸಾದ ಈಕೆ ಚುರುಕಾಗಿ ಓಡಾಡುವ ಆಕರ್ಷಕ ವ್ಯಕ್ತಿತ್ವವುಳ್ಳವಳು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ಈಕೆ ಚಂದ್ರಪ್ಪನನ್ನು ಮದುವೆ ಆಗಿ ಪಟ್ಟಣ ಸೇರುತ್ತಾಳೆ. ರವಿನಾಯ್ದು ಎಂಬ ಸಿನಿಮಾ ನಿರ್ದೇಶಕನ ಪರಿಚಯವಾಗುತ್ತದೆ. ಹಳ್ಳಿಯ ಹೆಣ್ಣು ದೇವಿಯ ಸೌಂದರ್ಯಕ್ಕೆ ರವಿನಾಯ್ದು ಮನಸೋಲುತ್ತಾನೆ. ಇಲ್ಲಿ ಒಬ್ಬ ಹಳ್ಳಿಯ ಹೆಣ್ಣು ಸಮಾಜವನ್ನು ಕಂಡ ರೀತಿ ಕಾಮಪ್ರವೃತ್ತಿಗೆ ಕಂಡುಕೊಂಡ ಹೊಸ ರೀತಿ ಮನೋಜ್ಞವಾಗಿ ಚಿತ್ರಿತವಾಗಿದೆ.

ಸ್ಪೃಶ್ಯ-ಅಸ್ಪೃಶ್ಯ ಜಗತ್ತಿನ ಸಂಕ್ಷಿಪ್ತ ನೋಟ **'ಮುಟ್ಟಿಸಿಕೊಂಡವನು'** ಕಥೆಯ ವಸ್ತು. ಮೇಲ್ವರ್ಗದವರು ಕೆಳವರ್ಗದವರನ್ನು ನೋಡುವ ರೀತಿ ಶತಮಾನಗಳಿಂದಲೂ ದಮನಕಾರಿಯಾಗಿಯೇ ಉಳಿದಿದೆ. ಇಂತಹ ದಮನಕಾರಿ ಪ್ರವೃತ್ತಿಯನ್ನು ಬಸಲಿಂಗ ಮತ್ತು ಅವನ ಹೆಂಡತಿ ವ್ಯಕ್ತಪಡಿಸಿದರೆ, ಡಾ. ತಿಮ್ಮಪ್ಪ ಅಸ್ಪೃಶ್ಯ ಜಗತ್ತನ್ನು ಪ್ರತಿನಿಧಿಸುತ್ತಾನೆ. ಸ್ಪೃಶ್ಯ-ಅಸ್ಪೃಶ್ಯ ಜಗತ್ತಿಗೆ ಲಂಕೇಶರು ಕೊಡುವ ನ್ಯಾಯ ಪರಿಣಾಮಕಾರಿಯಾದದು. ಇಂತಹ ಅಂಶವನ್ನು ಅನೇಕ ಪಾತ್ರಗಳು ತಮ್ಮದೇ ಆದ ನೆಲೆಯಲ್ಲಿ ನಿರ್ವಹಿಸುವರು.

**'ದಾಹ'** ಕಥೆಯೂ ಕಾಮಪ್ರವೃತ್ತಿಗೆ ವಿಶಿಷ್ಟತೆಯನ್ನು ನೀಡುವ ಪ್ರಯತ್ನವೇ ದಾಹ ಕಥೆಯ ವಸ್ತುವಾಗಿದೆ. ಕಾಮಪ್ರವೃತ್ತಿಯ ದಾಹ ತನ್ನ ಹೆಂಡತಿ ಸರೋಜಾಳ ಸಾವಿನ ಬಳಿಕ ನಿವೇದಕನಲ್ಲಿ ಕಾಡುವ ಪಾಪಪ್ರಜ್ಞೆ, ನೋವನ್ನು ವ್ಯಕ್ತಗೊಳಿಸುವ ಪ್ರಯತ್ನ ಲಂಕೇಶರ ದಾಹ ಕಥೆಯಲ್ಲಿ ನಡೆದಿದೆ.

**'ಸ್ಟೆಲ್ಲಾ ಎಂಬ ಹುಡುಗಿ'** ಕಥೆಯಲ್ಲಿನ ನರ್ಸ್ ಸ್ಟೆಲ್ಲಾಳ ಮೂಕ ಸಂವೇದನೆ ಅಂದರೆ ತನ್ನ ಗಂಡನಾದ ಸ್ಮಿಥ್‌ನ ಜೊತೆಯಲ್ಲಿಯರಬೇಕೋ ಅಥವಾ ಪ್ರೇಮಿ ಫ್ರಾನ್ಸಿಸ್‌ನ ಬಳಿ ಇರಬೇಕೋ ಎಂಬ ಗೊಂದಲದಲ್ಲಿರುತ್ತಾಳೆ. ಇದರ ಮಧ್ಯೆ ಆಸ್ಪತ್ರೆಯಲ್ಲಿ ರೋಗಿಯಾಗಿ ದಾಖಲಾದ ಸುಬ್ಬಣ್ಣನಿಗೆ ಇವಳೆಂದರೆ ಪ್ರಾಣ. ಇವಳ ಮೈಯಲ್ಲಿ ತಾಯ್ತನದ ವಾಸನೆ ನೋಡಲು ಹಂಬಲಿಸುತ್ತಾನೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿರುವ ಪಾತ್ರಗಳಲ್ಲಿ ಆಗುವ ಪಲ್ಲಟಗಳನ್ನು ಇಲ್ಲಿ ನೋಡಬಹುದು. ಜೊತೆಗೆ ಅವರು ಕಟ್ಟಬಯಸುವ ಹೊಸ ಸಮಾಜವನ್ನು ನೋಡಬಹುದು.

**'ಅಧಿಕಾರಿಗಳು ಮತ್ತು ಕೆಲಸದವ'** ಎಂಬ ಕಥೆಯಲ್ಲಿ ಮೇಲ್ವರ್ಗ, ಕೆಳವರ್ಗ, ಮೇಲು-ಕೀಳು ಪ್ರವೃತ್ತಿಯ ದಮನಕಾರಿ ಪರಿಸ್ಥಿತಿಯೂ ಪ್ರತಿಭಟನೆಯ ನೆಲೆಯನ್ನು ಕಾಣದೇ ಬಹಳ ನಯವಾಗಿ ವ್ಯಕ್ತವಾಗಿದೆ. ಮೇಲುವರ್ಗದ ಅಧಿಕಾರಿಗಳು, ಕೆಳವರ್ಗದ ಕೆಲಸದವರನ್ನು

ಬಳಸಿಕೊಳ್ಳುವ ರೀತಿ ಶೋಷಣೆಯ ನೆಲೆಯನ್ನು ಬಿಂಬಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಕಥೆಯನ್ನು ಈ ಸಂಪ್ರಬಂಧ ಬರೆಯಲು ಆಯ್ಕೆ ಮಾಡಲಾಗಿದೆ.

**'ಕೆರೆಯ ನೀರನು ಕೆರೆಗೆ ಚೆಲ್ಲಿ'** ಎಂಬ ರೋಮ್ಯಾಂಟಿಕ್ ಕಥೆಯಲ್ಲಿ ಬರುವ ಗೌರಿ, ಶಿವರುದ್ರ, ಪರಮೇಶ ಆಧುನಿಕತೆಯನ್ನು ಬಯಸುವ ತರುಣ ಪಾತ್ರಗಳು. ಗೌರಿ, ಶಿವರುದ್ರ ಗ್ರಾಮೀಣ ಪರಿಸರದಲ್ಲಿ ಕಂಡುಬಂದರೆ ಪರಮೇಶ ಪಟ್ಟಣದ ಪರಿಸರದಲ್ಲಿ ಕಂಡುಬರುತ್ತಾನೆ. ಪದವಿ ಪಡೆದ ಪರಮೇಶಿ ಹಳ್ಳಿಗೆ ಬಂದಾಗ ಆಡುವ ಇಂಗ್ಲಿಷ್ ಮಾತುಗಳು, ಅವನ ಚೀಪ್ ರೋಮ್ಯಾನ್ಸ್ ತೀರ ಕೃತ್ರಿಮವಾಗಿ ಕಥೆಯಲ್ಲಿ ಬರುತ್ತದೆ. ಗೌರಿ, ಶಿವರುದ್ರ, ಪರಮೇಶಿ ಆಧುನಿಕತೆಯನ್ನು ಬಯಸುವ ತರುಣ ಪಾತ್ರಗಳ ಗುಂಪಿನಲ್ಲಿ ಬರುತ್ತಾರೆ. ಅವರು ಕಾಣುವ ಕನಸು ಹೊಸ ಸಮಾಜದ ಸೃಷ್ಟಿಯ ದ್ಯೋತಕದಂತಿದೆ. ಪರಮೇಶನನ್ನು ಅನುಕರಿಸಲು ಹೊರಟ ಗೌರಿ ಮತ್ತು ಶಿವರುದ್ರ ಆಧುನಿಕತೆಯನ್ನು ಬಯಸುವ, ಬದಲಾವಣೆಯನ್ನು ಬಯಸುವ ಹೊಸತನವನ್ನು ವ್ಯಕ್ತಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕಥೆಯ ವಿಮರ್ಶೆಯನ್ನು ಮಾಡಲಾಗಿದೆ.

**'ಉಲ್ಲಂಘನೆ'** ಕಥೆ ಸಾಮಾಜಿಕ ಕ್ರಾಂತಿಯ ಮಾನವೀಯ ಆಯಾಮವನ್ನು ತೆರೆದಿಡುತ್ತದೆ. ಕೃಷ್ಣಸ್ವಾಮಿ ಜಮೀನ್ದಾರನಾಗಿ ಕಂಡುಬಂದರೂ ಪ್ರಮಾಣಿಕತೆ ಸಂಯಮಗಳ ಮೂರ್ತಿಯಾಗಿ ಕಂಡುಬರುತ್ತಾನೆ. ಅವನ ಎದುರು ಅಷ್ಟೇ ಪ್ರಾಮಾಣಿಕವಾಗಿ ನಿಲ್ಲುವ ನಾಗ ಮತ್ತು ಭರಮ ಕಥೆಗೆ ಹೊಸ ತಿರುವು ನೀಡುವಲ್ಲಿ ಯಶಸ್ವಿಯಾಗುತ್ತಾರೆ. ಜಮೀನ್ದಾರಿ ಪದ್ಧತಿಗೆ ಹೊಸ ದೃಷ್ಟಿಕೋನ ನೀಡುವುದು ಕಥೆಯ ಮುಖ್ಯ ವಸ್ತು. ಈ ನೆಲೆಯಿಂದ ನೋಡಿದಾಗ ಕಥೆ ಹೊಸತನದ ಅಂಶಗಳಿಂದ ಕೂಡಿದೆ.

ಒಟ್ಟಾರೆ ಈ ಸಂಪ್ರಬಂಧ ರಚಿಸಲು ತೆಗೆದುಕೊಂಡಿರುವ ಆಯ್ದ ಹತ್ತು ಕಥೆಗಳಲ್ಲಿನ ವಿವಿಧ ರೀತಿಯ ಪಾತ್ರಗಳು, ವಿಶಿಷ್ಟ ರೀತಿಯ ಸಮಾಜ ಕಟ್ಟುವ ರೀತಿ, ಸಾಂಸ್ಕೃತಿಕ ಮತ್ತು ಪಾರಂಪರಿಕ ಮೌಲ್ಯಗಳನ್ನು ಬದಲಾವಣೆಯ ನೆಲೆಯಲ್ಲಿ ವಿವರಿಸುವ, ವಿಮರ್ಶಿಸುವ ನಿಟ್ಟಿನಲ್ಲಿ ಈ ಅಧ್ಯಯನ ಸಾಗುತ್ತದೆ. ಈ ಕಥೆಗಳ ಮೂಲಕ ವಿವಿಧ ವ್ಯಕ್ತಿಗಳು, ವಿವಿಧ ಸಾಮಾಜಿಕ ಸಂದರ್ಭಗಳಲ್ಲಿ ಮುಖಾಮುಖಿಯಾದಾಗ ಎದುರಿಸುವ ಪಲ್ಲಟಗಳನ್ನು ಈ ಸಂಪ್ರಬಂಧದಲ್ಲಿ ಹೇಳಲಾಗಿದೆ. ವ್ಯಕ್ತಿ ಮತ್ತು ಸಮಾಜದ ನಡುವಿನ ವಿವಿಧ ಬಗೆಯ ನಂಟುಗಳನ್ನು ಗುರುತಿಸುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ.

ಅಧ್ಯಾಯ–೨

# ವ್ಯಕ್ತಿ ಮತ್ತು ಸಮಾಜ

ಲಂಕೇಶರ ಕಥನ ಸಾಹಿತ್ಯದಲ್ಲಿ ಕಂಡುಬರುವ ವ್ಯಕ್ತಿ, ಸಮಾಜ ಹಾಗೂ ಈ ಎರಡರ ಸಂಬಂಧಾಂತರಗಳನ್ನು ಪರಿಶೀಲಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶ. ಈ ಸಲುವಾಗಿ ವ್ಯಕ್ತಿ ಮತ್ತು ಸಮಾಜ ಎಂಬೆರಡೂ ಪರಿಕಲ್ಪನೆಗಳಿಗೆ ಸಂಬಂಧಪಟ್ಟಂತೆ Encyclopediaದ ಅಭಿಪ್ರಾಯಗಳು, ಆಕ್ಸ್‌ಫರ್ಡ್ ನಿಘಂಟು ಮತ್ತು ಇತರ ನಿಘಂಟುಗಳ ಅರ್ಥಗಳನ್ನು ಹಾಗೂ ಮನಃಶಾಸ್ತ್ರೀಯ ಹಾಗೂ ಸಮಾಜಶಾಸ್ತ್ರೀಯ ಹಿನ್ನೆಲೆಯಿಂದ ಹಲವು ವ್ಯಾಖ್ಯಾನಗಳನ್ನು ಸಂಗ್ರಹಿಸಲಾಗಿದೆ. ಈ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಲಂಕೇಶರ ಕಥೆಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

1. ಮನಃಶಾಸ್ತ್ರಜ್ಞ ವ್ಯಾಟ್ಸನ್‌ರವರ ಪ್ರಕಾರ, "ವಿಶ್ವಾಸಾರ್ಹವಾದ ಮಾಹಿತಿಯನ್ನು ನೀಡುವುದಕ್ಕಾಗಿ ಬಹಳ ಕಾಲದಿಂದ ಪ್ರತ್ಯಕ್ಷ ನೀರೀಕ್ಷಣೆಯ ಮೂಲಕ ಕಂಡುಕೊಂಡ ಚಟುವಟಿಕೆಗಳ ಒಟ್ಟು ಮೊತ್ತವೇ ವ್ಯಕ್ತಿ.

2. ಆಕ್ಸ್‌ಫರ್ಡ್ ನಿಘಂಟಿನ ಪ್ರಕಾರ ವ್ಯಕ್ತಿ ಅಥವಾ Individual ಎಂದರೆ "Considered separately rather than as part of a group : We inteniewed each individual member of the community"

3. ವ್ಯಕ್ತಿ ಅನ್ನುವುದನ್ನು ವ್ಯಕ್ತಿತ್ವದ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬಹುದು "Individual indicates separateness, as in individualism. Individuality is the state or quality of being an individual, a person separate from other persons and possessing his or her own needs, goals and desires".

ವ್ಯಕ್ತಿ ಮಾತನಾಡುವ, ಅಭಿವ್ಯಕ್ತಿಸುವ ಸಾಂಕೇತಿಕ ಪ್ರತಿಮೆ, ವ್ಯಕ್ತಿ ತನ್ನ ಪ್ರತಿಭೆಯಿಂದ ಸಮಾಜದ ಬದಲಾವಣೆಗಳಿಗೆ ಹೊಸ ರೂಪವನ್ನು ಕೊಡಲು ಸದಾ ಹಾತೊರೆಯುತ್ತಿರುತ್ತಾನೆ. ಈ ಅಂಶವನ್ನು ಲಂಕೇಶರ ಕಥೆಗಳಲ್ಲಿನ ಹಲವು ವ್ಯಕ್ತಿಗಳು ಸಾಬಿತುಪಡಿಸುತ್ತಾರೆ. ಲಂಕೇಶರ ಕಥೆಗಳೆಲ್ಲಾ ಮೂಲತಃ ವ್ಯಕ್ತಿ ಕೇಂದ್ರಿತವಾದವು. ಕಥೆಗಳಲ್ಲಿ ವಿವಿಧ ಪ್ರಕಾರದ ವ್ಯಕ್ತಿಗಳು ಕಂಡುಬರುತ್ತಾರೆ. ವ್ಯಕ್ತಿಗಳು ಆಯಾ ಸಂದರ್ಭದ ಇಡೀ

ವ್ಯವಸ್ಥೆಯನ್ನು ನಿರ್ಧರಿಸುತ್ತಾರೆ. ಮನುಷ್ಯನ ವ್ಯಕ್ತಿತ್ವ ಎಷ್ಟೊಂದು ವೈವಿಧ್ಯಮಯ ಮತ್ತು ನಿಗೂಢ. ಮನುಷ್ಯ ಇಷ್ಟೇ ಎಂದು ಗೆರೆ ಎಳೆದು ತೋರಿಸಲು ಸಾಧ್ಯವಿಲ್ಲ. ಈ ಎಲ್ಲಾ ಅಂಶಗಳನ್ನು ಲಂಕೇಶರ ಕಥೆಗಳಲ್ಲಿ ಕಾಣಬಹುದು. ಕಥೆಗಳಲ್ಲಿ ಕೆಟ್ಟವರು, ಒಳ್ಳೆಯವರು ಎಂದು ಎರಡು ರೀತಿಯ ಪಾತ್ರಗಳನ್ನು ಮಾಡಿ ತೋರಿಸುವ ಬದಲಾಗಿ ಮನುಷ್ಯನ ಬಹುಮುಖಿ ವ್ಯಕ್ತಿತ್ವಗಳ, ಸಣ್ಣತನಗಳ ಅನಾವರಣವಾಗುತ್ತದೆ. ಒಟ್ಟಾರೆ ಮನುಷ್ಯನಲ್ಲಿ ಸುಪ್ತವಾದ, ಕಾರ್ಯಸ್ಫೋಟವಾಗುವ ಬೇರೆ ಬೇರೆ ಸನ್ನಿವೇಶಗಳನ್ನು ಲಂಕೇಶರ ಕಥೆಗಳು ಕಟ್ಟಿಕೊಡುತ್ತವೆ.

ವ್ಯಕ್ತಿಯ ಬಹುಮುಖಿ ಪ್ರವೃತ್ತಿಗಳ ಮನಃಸ್ಥಿತಿಗಳು ವಿವಿಧ ಸಂದರ್ಭಗಳಲ್ಲಿ ಹೇಗೆ ಕೆಲಸ ನಿರ್ವಹಿಸುತ್ತವೆ ಎಂಬುದನ್ನು ತಿಳಿಯಲು ಲಂಕೇಶರ ಕಥೆಗಳು ಅನುವು ಮಾಡಿಕೊಟ್ಟಿವೆ. ಇವರ ಕಥೆಗಳಲ್ಲಿ ಬರುವ ಹೊಸ ವ್ಯಕ್ತಿ ಹಳ್ಳಿ ಮತ್ತು ಪಟ್ಟಣಗಳ ನಡುವೆ ಸಿಕ್ಕಿ ಒದ್ದಾಡುತ್ತಾನೆ. ಈತನನ್ನು ಪಟ್ಟಣದ ಸಂಪರ್ಕಕ್ಕೆ ತಂದಿರುವುದು ವಿದ್ಯಾಭ್ಯಾಸ. ಈ ವಿದ್ಯಾಭ್ಯಾಸದ ಕಾರಣಕ್ಕಾಗಿ ಈ ಹೊಸ ಪ್ರಜ್ಞೆಯ ನಾಯಕ ಇತ್ತ ಪೂರ್ಣವಾಗಿ ಹಳ್ಳಿಗನೂ ಅಲ್ಲ, ಅತ್ತ ಪೂರ್ಣವಾಗಿ ಪಟ್ಟಣಿಗನೂ ಅಲ್ಲ. ಆದರೆ ಈ ಹೊಸಪ್ರಜ್ಞೆಯ ನಾಯಕನಲ್ಲಿ ಹಳ್ಳಿಯ ಅನೇಕ ಗುಣಗಳಿವೆ. ಅವನ ಸಂವೇದನೆಯ ಮೂಲ ಚೌಕಟ್ಟು ಪ್ರಾರಂಭದಲ್ಲಿ ಹಳ್ಳಿಗನ ಮುಗ್ಧತೆಯಲ್ಲಿ ಕಂಡುಬರುತ್ತದೆ. ಬರಬರುತ್ತಾ ತನ್ನ ಮುಗ್ಧತೆಯ ಮಿತಿಗಳನ್ನು ಅರ್ಥಮಾಡಿಕೊಳ್ಳುತ್ತಾ ಬರುತ್ತಾನೆ. ಹೀಗಾಗಿ ಈ ಹೊಸ ಪ್ರಜ್ಞೆಯ ನಾಯಕ ಪಾತ್ರಗಳ ಮಹತ್ವ ಇರುವುದು ತಮ್ಮ ಮುಗ್ಧತೆಯನ್ನು ಕಳೆದುಕೊಳ್ಳುವಲ್ಲಿ. ಈ ದೃಷ್ಟಿಯಿಂದ "ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ"ಯ ಉಮಾಪತಿ ಪ್ರಮುಖವಾಗಿ ಕಂಡುಬರುತ್ತಾನೆ.

ಲಂಕೇಶರ ಕಥನ ಬರವಣಿಗೆಗಳು ವಿಭಿನ್ನ ಬಗೆಯ 'ವ್ಯಕ್ತಿ'ಗಳ ಮಾದರಿಗಳನ್ನು ತಿಳಿಸಿಕೊಡುತ್ತವೆ. ತುಳಿತಕ್ಕೀಡಾದ ವ್ಯಕ್ತಿಗಳು, ಅಧಿಕಾರಶಾಹಿ ವ್ಯಕ್ತಿಗಳು ವಿವಿಧ ಕಥೆಗಳಲ್ಲಿ ಪ್ರಮುಖವಾಗಿ ಬರುತ್ತಾರೆ. ಈ ಎರಡು ಬಗೆಯ ವ್ಯಕ್ತಿಗಳಲ್ಲೂ ಘರ್ಷಣೆಗಳು ಪ್ರತಿ ಹಂತದಲ್ಲೂ ನಡೆಯುತ್ತಿರುತ್ತದೆ. ಅಧಿಕಾರಶಾಹಿ ವ್ಯಕ್ತಿಗಳು ದಬ್ಬಾಳಿಕೆಯ ವಿವಿಧ ಸ್ವರೂಪಗಳಲ್ಲಿ ಕಂಡುಬಂದರೆ ತುಳಿತಕ್ಕೀಡಾದ ವ್ಯಕ್ತಿಗಳು ದಬ್ಬಾಳಿಕೆಯನ್ನು ಹೊರುವ ರೂಪಗಳಲ್ಲಿ ಕಂಡುಬರುತ್ತಾರೆ. ಆದರೆ ಇವರಿಬ್ಬರ ನಡುವಿನ ಘರ್ಷಣೆಗಳು ವಿಕೋಪಕ್ಕೇರಿದಾಗ ವಿಶಿಷ್ಟವಾದ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವಲ್ಲಿ ಕಥೆಗಳು ವಿಶಿಷ್ಟ ಪಾತ್ರ ವಹಿಸುತ್ತವೆ.

ತುಳಿತಕ್ಕೀಡಾದ ವ್ಯಕ್ತಿಗಳಲ್ಲಿ ಬಡವರು, ಕೆಳಜಾತಿಯವರು, ಕೆಳ ವರ್ಗದವರು, ಮಹಿಳೆಯರು ಕಂಡುಬಂದರೆ, ಅಧಿಕಾರಶಾಹಿ ವರ್ಗದ ವ್ಯಕ್ತಿಗಳಲ್ಲಿ ಜಮೀನ್ದಾರರು, ಮೇಲ್ಜಾತಿಯವರು, ಶ್ರೀಮಂತರು ಬರುತ್ತಾರೆ. ಇವರಲ್ಲಿ ತರುಣರೂ ಕಂಡುಬರುತ್ತಾರೆ. ಸಾಮಾನ್ಯವಾಗಿ ಆಧುನಿಕತೆಯನ್ನು ಒಲಮೆಗಣ್ಣಿನಿಂದ ನೋಡುವ ಇವರು ಸದಾ ಆಕರ್ಷಣೆಗೆ ಒಳಗಾಗಿರುತ್ತಾರೆ. ಇಂತಹ ಆಕರ್ಷಣೆ ವಿದ್ಯಾಭ್ಯಾಸದಿಂದ ಬಂದಿರುವುದು ನಮಗೆ ಕಥೆಗಳ ಮೂಲಕ ಸ್ಪಷ್ಟವಾಗಿ ಗೋಚರಿಸುತ್ತದೆ. ಒಮ್ಮೊಮ್ಮೆ ತರುಣ ಪಾತ್ರಗಳು ಬಳಸುವ ಇಂಗ್ಲಿಷ್ ಪದಗಳು, ಇವುಗಳನ್ನು ಕೇಳಿ ಮಂತ್ರಮುಗ್ಧರಾಗುವ ಹಳ್ಳಿಯ ಜನರು ಇವರಿಬ್ಬರಿಗೂ ಒಂದು ಅಂತರವನ್ನು ಕಥೆಗಳಲ್ಲಿ ಕಾಣಬಹುದು. ಹೊಸತು–ಹಳತುಗಳ ಸಂಘರ್ಷದಲ್ಲಿ ಹೊಸತು ಉಳಿದು ಕೊಳ್ಳುವುದು ಕಥೆಗಳಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ. ವ್ಯಕ್ತಿಗಳ ಮನಸ್ಸುಗಳ ಯೋಚನಾಲಹರಿ ಸದಾ ಕಾಲದಲ್ಲೂ ಬಣ್ಣಬಣ್ಣದ ಬದುಕನ್ನು ಅಪೇಕ್ಷಿಸುತ್ತದೆ ಎಂಬುದು ತರುಣ ಪಾತ್ರಗಳ ಆಧುನಿಕತೆಯ ಮೇಲಿನ ಅಪಾರ ಒಲವು ತೋರಿಸಿಕೊಡುತ್ತದೆ.

ಲಂಕೇಶರ ಕಥೆಗಳಲ್ಲಿ ಬಡವರು, ಕೆಳಜಾತಿಯವರು, ಕೆಳವರ್ಗದವರು ಮತ್ತು ಮಹಿಳೆಯರು ಶೋಷಿತ ವರ್ಗಕ್ಕೆ ಸೇರಿದವರಾಗಿ ಕಂಡುಬರುತ್ತಾರೆ. ಆದರೂ ಅಷ್ಟೇನು ದಮನಕಾರಿ ಪ್ರವೃತ್ತಿಗೆ ಒಳಪಡುವುದಿಲ್ಲ. ಈ ವರ್ಗದ ವ್ಯಕ್ತಿಗಳನ್ನು ಹೊಸ ದೃಷ್ಟಿಕೋನದಿಂದ ನೋಡಿ ಹೊಸ ಸಾಮಾಜಿಕ ನ್ಯಾಯವನ್ನು ಕಥೆಗಳು ಒದಗಿಸುತ್ತವೆ. ಶತಶತಮಾನಗಳಿಂದ ನಡೆದ ಶೋಷಣೆಯ ಬದಲಾದ ಪ್ರಕ್ರಿಯೆಯನ್ನು ಲಂಕೇಶರ ಕಥನ ಸಾಹಿತ್ಯ ತೋರಿಸಿಕೊಟ್ಟಿದೆ. ಅಸಾಹಯಕತೆಯನ್ನು ದಿಕ್ಕರಿಸಿ ಇಡೀ ಊರನ್ನೇ ದಿಟ್ಟತನದಿಂದ ಎದುರಿಸಿ ಊರನ್ನೇ ಉರಿಸಿದ ಚೆಲುವಮ್ಮ, ಅಸ್ಪೃಶ್ಯನಾಗಿದ್ದರೂ ಯಾವುದೇ ಕೀಳರಿಮೆಗೆ ಒಳಗಾಗದೆ ಸ್ಪೃಶ್ಯರನ್ನು ಒಲಿಸಿಕೊಂಡ ಡಾ॥ ತಿಮ್ಮಪ್ಪ ಈ ಅಂಶಗಳಿಗೆ ಸಾಕ್ಷಿಯಾಗಿ ನಿಲ್ಲುತ್ತಾರೆ.

ಅಧಿಕಾರಶಾಹಿ ವರ್ಗದವರು ಶೋಷಣೆಯನ್ನು ಏರುವ ವರ್ಗವಾಗಿ ಪರಿಣಮಿಸಿದರು ಸಹ ಪ್ರೀತಿ, ವಿಶ್ವಾಸ, ಸಹಕಾರ ಮುಂತಾದ ಮಾನವೀಯ ಮೌಲ್ಯಗಳು ಅವರನ್ನು ಮಾರ್ಪಾಡು ಮಾಡುವುದನ್ನು ಕಥೆಗಳಲ್ಲಿ ತಿಳಿಯಬಹುದು. ಜಮೀನ್ದಾರರು, ಮೇಲ್ಜಾತಿಯವರು, ಶ್ರೀಮಂತರು ಬದಲಾವಣೆಯ ಪ್ರತಿಮೆಗಳಾಗಿ ಪರಿವರ್ತನೆ ಯಾಗುವುದನ್ನು ಲಂಕೇಶರ ಕಥೆಗಳಲ್ಲಿ ಕಾಣಬಹುದು. ಇದು ಲಂಕೇಶರ ಕಥೆಗಳ ವೈಶಿಷ್ಟ್ಯವೂ ಹೌದು. ಸಂಪ್ರದಾಯವಾದಿಯಾಗಿದ್ದ ಮಲ್ಲಯ್ಯ ತನ್ನ ಮಗಳ ಪ್ರೀತಿ ಒಪ್ಪಿದ್ದು, ಸಾವಿರಾರು ಎಕರೆ ಜಮೀನನ್ನು ಎಲ್ಲರಿಗೂ ಹಂಚಿ ನಿರ್ಮಲ ಮನಸ್ಥಿತಿಯಲ್ಲಿ

ಮಾನವಮೂರ್ತಿಯಂತೆ ಕಂಗೊಳಿಸುವ ಕೃಷ್ಣಸ್ವಾಮಿ ಪರಿವರ್ತನೆಯ ಪ್ರತಿಮೆಗಳಾಗಿ ಕಾಣಿಸುತ್ತಾರೆ.

ಒಟ್ಟಾರೆ ಅಧಿಕಾರಶಾಹಿ ವರ್ಗದವರು ಮತ್ತು ಶೋಷಿತ ವರ್ಗದವರು ಲಂಕೇಶರ ಕಥೆಗಳಲ್ಲಿ ವೈವಿಧ್ಯಮಯ ವ್ಯಕ್ತಿಗಳ ಸ್ವರೂಪಗಳಲ್ಲಿ ಕಂಡುಬರುತ್ತಾರೆ. ಇವರು ಸಮಾಜದ ರೀತಿ–ನೀತಿಗಳಿಗೆ, ಕಟ್ಟು–ಕಟ್ಟಳೆಗಳಿಗೆ ಶರಣಾಗದೆ ತಮ್ಮನ್ನು ತಾವು ಕಂಡುಕೊಳ್ಳಲು ಮುಂದಾಗುತ್ತಾರೆ. ಲಂಕೇಶರ ಕಥೆಗಳಲ್ಲಿ ಸಾಮಾನ್ಯವಾಗಿ ವ್ಯಕ್ತಿಗಳು ಯಾರ ಪ್ರಭಾವಕ್ಕೂ ಬಲಿಯಾಗದೇ ಸ್ವತಂತ್ರವಾದ ವ್ಯಕ್ತಿತ್ವವುಳ್ಳವರಾಗಿರುತ್ತಾರೆ. ತಮ್ಮನ್ನು ತಾವೇ ಬದಲಾವಣೆಯ ಪ್ರಕ್ರಿಯೆಗೆ ತೊಡಗಿಸಿಕೊಂಡು ಸಾಮಾಜಿಕ ಬದಲಾವಣೆಗೂ ಕಾರಣವಾಗುತ್ತಾರೆ.

ಒಬ್ಬ ವ್ಯಕ್ತಿಯ ಬದುಕು ಪ್ರಾರಂಭವಾಗುವುದು ಸಮಾಜದ ಮುಖಾಂತರವೆ. ಆದ್ದರಿಂದ ಮೊದಲಿಗೆ ಸಮಾಜವೆಂದರೇನು ಎಂಬುದನ್ನು ತಿಳಿಯುವುದು ಬಹಳ ಮುಖ್ಯ.

೧. "ಸಮಾಜವು ಸಾಮಾಜಿಕ ಸಂಬಂಧಗಳ ಬಲೆ" ಎನ್ನುತ್ತಾರೆ ಮೆಕೈವರ್ ಮತ್ತು ಪೇಜ್.

೨. "ವ್ಯಕ್ತಿಯ ಬಾಲ್ಯ, ಪ್ರೌಢ, ಪ್ರಾಯ ಹಾಗೂ ವೃದ್ಧಾಪ್ಯದವರೆಗೆ ಚೈತನ್ಯದ ರೂಪದಲ್ಲಿ ಪ್ರಭಾವ ಬೀರುವುದೇ ಸಮಾಜವಾಗಿದೆ" ಎನ್ನುತ್ತದೆ ಮನಃಶಾಸ್ತ್ರ.

೩. ಸಮಾಜವೆಂದರೆ, "People in general, living together in communities" ಎಂಬುದು ಆಕ್ಸ್‌ಫರ್ಡ್ ಡಿಕ್ಷನರಿಯ ವ್ಯಾಖ್ಯಾನ.

ಒಡನಾಡಿಗಳ ಒಡನಾಟದಿಂದ ಒಟ್ಟುಗೂಡಿರುವ ವ್ಯವಸ್ಥೆಯೇ ಸಮಾಜ. ಸಮಾಜವು ವ್ಯಕ್ತಿಗಳ ಬದುಕಿನ ಪ್ರಕ್ರಿಯೆಗಳಿಗೆ ನೆಲೆಯನ್ನು ಒದಗಿಸಿಕೊಡುತ್ತದೆ. ಈ ಮೂಲಕ ಲಂಕೇಶರ ಕಥೆಗಳಲ್ಲಿ ಬರುವ ವ್ಯಕ್ತಿಗಳ ಕಟ್ಟುವ ಸಮಾಜವನ್ನು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. "ಸ್ವಾತಂತ್ರ್ಯೋತ್ತರದ ಭ್ರಮ ನಿರಸನದಿಂದಾಗಿ ಹುಟ್ಟಿಕೊಂಡಂತಹ ನವ್ಯರಲ್ಲಿ ಎಲ್ಲಾ ಬಗೆಯ ರಮ್ಯತೆಯನ್ನು, ಆದರ್ಶವನ್ನು ಸಂದೇಹಿಸುವ ಮನಃಸ್ಥಿತಿ ಹುಟ್ಟಿಕೊಂಡಿತು"[3] ಈಗಾಗಲೇ ಹೇಳಿರುವಂತೆ ನವ್ಯ ಸಾಹಿತ್ಯ ಸಂದರ್ಭದಲ್ಲಿ

---

[೩] "ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ", ಸಿ. ವೆಂಕಟೇಶ್, ಕನ್ನಡ ಸಂಘ ಕ್ರೈಸ್ಟ್ ಕಾಲೇಜು ಪ್ರಕಾಶನ, ಬೆಂಗಳೂರು, ೧೯೯೮, ಪು.೧–೪೦.

ಅಸ್ತಿತ್ವವಾದವು ನವ್ಯ ಲೇಖಕರ ಮೇಲೆ ಪ್ರಬಲವಾಗಿ ಪ್ರಭಾವ ಬೀರಿತು. ಇದರ ಹಿನ್ನೆಲೆಯಲ್ಲಿ ವಾಸ್ತವ ಪ್ರಜ್ಞೆಯಿಂದ ಸಮಾಜವನ್ನು ನೋಡುವ ಕ್ರಮ ಆರಂಭಗೊಂಡಿತು. ರಮ್ಯತೆ ಮತ್ತು ಆದರ್ಶವಾದ ಇರದೇ ಇರುವಂತಹ ಒಂದು ವಾಸ್ತವಪ್ರಜ್ಞೆ ಪ್ರಾರಂಭವಾಯಿತು. ಹೊಸ ಸಂವೇದನೆಯುಳ್ಳ ಹಲವು ವ್ಯಕ್ತಿಗಳು ಸಮಾಜವನ್ನು ವಾಸ್ತವತೆಯ ನೆಲೆಯಲ್ಲಿ ಕಾಣಲು ಆರಂಭಿಸಿದರು. ಸಾಂಪ್ರದಾಯಸ್ಥ ಸಮಾಜದ ವ್ಯಕ್ತಿಗಳ ಮೌಲ್ಯಗಳ ವಿರುದ್ಧದ ಮನಸ್ಥಿತಿ ಇರುವ ನಾಯಕರು ಇಲ್ಲಿ ಬರುತ್ತಾರೆ. ಇವರೆಲ್ಲಾ ನಗರಪ್ರಜ್ಞೆಯಿಂದ ಆಕರ್ಷಿತರಾದವರೇ ಆಗಿರುತ್ತಾರೆ.

ಲಂಕೇಶರ ಕಥೆಗಳಲ್ಲಿ ಬರುವ ಸಮಾಜ ಮತ್ತು ವ್ಯಕ್ತಿಗಳ ಸಂಬಂಧಗಳನ್ನು ವಿವರಿಸಲು ಪ್ರಸ್ತುತ ಸಂಪ್ರಬಂಧದಲ್ಲಿ ಪ್ರಯತ್ನವನ್ನು ಮಾಡಲಾಗಿದೆ. ವ್ಯಕ್ತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳು, ಲಂಕೇಶರ ಕಥೆಗಳಲ್ಲಿ ಗ್ರಾಮ ಮತ್ತು ನಗರ ಸಮಾಜಗಳು ಅವುಗಳಿಗೆ ಒಪ್ಪುವ ವ್ಯಕ್ತಿಗಳು ಬರುತ್ತಾರೆ. ಗ್ರಾಮೀಣ ಸಮಾಜದಲ್ಲಿ ಹುಟ್ಟಿ ಬೆಳೆದ ವ್ಯಕ್ತಿ ಗ್ರಾಮೀಣ ಪರಿಸರದ ಸಂವೇದನೆಯನ್ನು ನಗರ ಪರಿಸರಕ್ಕೆ ಒಯ್ದಾಗ ಉಂಟಾಗುವ ಪಲ್ಲಟಗಳು ಮತ್ತು ಗೊಂದಲಗಳು ಕಥೆಗಳಲ್ಲಿ ಪರಿಣಾಮಕಾರಿಯಾಗಿ ಮೂಡಿಬರುತ್ತವೆ. ಗ್ರಾಮ ಮತ್ತು ನಗರ ಸಮಾಜದಲ್ಲಿ ಉಂಟಾಗುತ್ತಿರುವ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಸೃಷ್ಟಿಸುತ್ತಿರುವ ಹೊಸ ವ್ಯಕ್ತಿಗಳನ್ನು ಶೋಧಿಸುವ ಪ್ರಯತ್ನಗಳು ಲಂಕೇಶರ ಕಥೆಗಳಲ್ಲಿ ಕಾಣಬಹುದು.

ನವ್ಯ ಸಂದರ್ಭದಲ್ಲಿದ್ದ ಕನ್ನಡದ ಪ್ರಮುಖ ಸಾಹಿತಿಗಳು ಗ್ರಾಮೀಣ ಸಮಾಜದ ಹಿನ್ನೆಲೆಯಿಂದ ಬಂದವರು. ಆದರೆ ಹೊಸ ಮೌಲ್ಯಗಳ ಪ್ರಭಾವಕ್ಕೆ ಸಿಲುಕಿದವರು. ಹೀಗಾಗಿ ಸೃಜನಶೀಲತೆಯ ಮೂಲ ದ್ರವ್ಯಗಳಲ್ಲಿ ಒಂದು ಅವರ ಆತ್ಮಾವಲೋಕನ. ತಮ್ಮ ಪ್ರಜ್ಞೆ ಮತ್ತು ಪರಿಸರಗಳ ಸಂಬಂಧಗಳನ್ನು ಪರೀಕ್ಷಿಸುವ ನೆಲೆಯಲ್ಲಿ ಗ್ರಾಮೀಣ ಸಮಾಜದ ಹಿನ್ನೆಲೆಯಲ್ಲಿ ಮುಖ್ಯ ಕೃತಿಗಳು ರೂಪುಗೊಂಡವು. ಲಂಕೇಶರ ಕಥನ ಸಾಹಿತ್ಯವನ್ನು ತಿಳಿಯುವ ಸಂದರ್ಭದಲ್ಲಿ ಸಮಾಜದ ವಿಭಿನ್ನ ರೂಪಗಳು ಕಾಣಿಸಿಕೊಳ್ಳುತ್ತವೆ.

ಲಂಕೇಶರ ಕಥೆಗಳಲ್ಲಿ ಸ್ಪೃಶ್ಯ-ಅಸ್ಪೃಶ್ಯ ಸಮಾಜ, ಸಾಂಪ್ರದಾಯಿಕ ಸಮಾಜ, ಆಧುನಿಕ ಸಮಾಜ ಎಂಬ ವಿವಿಧ ರೀತಿಯ ಸಮಾಜಗಳು ಕಾಣಿಸಿಕೊಳ್ಳುತ್ತವೆ. ಈ ಸಮಾಜಗಳ ಮುಖಾಮುಖಿಯನ್ನು ಲಂಕೇಶರ ಕಥೆಗಳಲ್ಲಿ ಕಾಣಬಹುದು. ಸ್ಪೃಶ್ಯ-ಅಸ್ಪೃಶ್ಯ ಸಮಾಜವು ಗ್ರಾಮ-ನಗರಗಳೆರಡರಲ್ಲೂ ಕಂಡುಬರುತ್ತದೆ. 'ಮುಟ್ಟಿಸಿಕೊಂಡವನು'

ಕಥೆಯಲ್ಲಿ ಈ ಮಾದರಿಯ ಸಮಾಜವನ್ನು ಕಾಣಬಹುದು. ಹಾಗೆಯೇ 'ಉಲ್ಲಂಘನೆ', 'ಅಧಿಕಾರಿಗಳು ಮತ್ತು ಕೆಲಸದವ' ಮುಂತಾದ ಕಥೆಗಳಲ್ಲೂ ಇಂತಹ ಸಮಾಜ ಅಸ್ತಿತ್ವದಲ್ಲಿದೆ. ಸ್ಪೃಶ್ಯ-ಅಸ್ಪೃಶ್ಯ ಎಂಬ ಬೇಧಗಳಿದ್ದರೂ, ಎಲ್ಲಿಯೂ ವಿಕೋಪಕ್ಕೇರಿದ ನಡವಳಿಕೆಗಳು ನಡೆಯುವುದಿಲ್ಲ. ಪ್ರತಿಭಟನೆಗಳು ಈ ಎರಡು ಅಂಶಗಳಲ್ಲಿಲ್ಲ. ಡಾ|| ತಿಮ್ಮಪ್ಪ-ಬಸಲಿಂಗ ಮತ್ತು ಕೃಷ್ಣಸ್ವಾಮಿ-ಭರಮ ಮುಂತಾದ ಪಾತ್ರಗಳ ಅನ್ಯೋನ್ಯ ಸಂಬಂಧದ ಮೂಲಕ ಸ್ಪೃಶ್ಯ-ಅಸ್ಪೃಶ್ಯತೆಗೆ ಹೊಸ ಆಯಾಮವನ್ನು ಲಂಕೇಶರ ಕಥೆಗಳು ಅಚ್ಚುಕಟ್ಟಾಗಿ ನಿರ್ವಹಿಸಿವೆ. ಡಾ|| ತಿಮ್ಮಪ್ಪನನ್ನು ಬಸಲಿಂಗ ಅಪ್ಪಿಕೊಂಡು ತನ್ನ ತಪ್ಪಿನ ಅರಿವಾಗಿ ನಡೆಯುವ ನಡವಳಿಕೆಗಳು ಜಗತ್ತು ಬದಲಾಗುತ್ತಿರುವ ಸ್ವರೂಪವನ್ನು ತೋರಿಸುತ್ತದೆ.

ಸಾಂಪ್ರದಾಯಿಕ ಸಮಾಜ-ಆಧುನಿಕ ಸಮಾಜಗಳು ಲಂಕೇಶರ ಕಥೆಗಳಲ್ಲಿ ಗ್ರಾಮಸಮಾಜ-ನಗರ ಸಮಾಜಗಳನ್ನು ರೂಪಿಸಿವೆ. ಆಧುನಿಕತೆಯನ್ನು ಸದಾ ಬಯಸುವ ತರುಣ ಪಾತ್ರಗಳು ನಗರ ಸಮಾಜವನ್ನು ಪ್ರತಿನಿಧಿಸಿ ರೊಮ್ಯಾಂಟಿಕ್ ನೆಲೆಯಲ್ಲಿ ಕಂಡುಬರುತ್ತಾರೆ. ಸಾಂಪ್ರದಾಯಿಕತೆಗಳಲ್ಲಿಯೇ ಇದ್ದು ಸೂಕ್ಷ್ಮವಾಗಿ ಸಮಾಜವನ್ನು ವೀಕ್ಷಿಸುವ ನೆಲೆಯಲ್ಲಿ ಗುರುತಿಸಲ್ಪಡುವ ವ್ಯಕ್ತಿಗಳು ಗ್ರಾಮ ಸಮಾಜವನ್ನು ಪ್ರತಿನಿಧಿಸುತ್ತವೆ.

'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಯಲ್ಲಿ ಬರುವ ಪರಮೇಶ ಬದುಕಿದ್ದ ಸಮಾಜ, ಗೌರಿ, ಶಿವರುದ್ರ ಬದುಕಲು ಹಂಬಲಿಸುವ ಸಮಾಜ ಆಧುನಿಕ ಸಮಾಜವನ್ನು ತೋರಿಸುತ್ತದೆ. ಈ ಪಾತ್ರಗಳು ರೊಮ್ಯಾಂಟಿಕ್ ಪಾತ್ರಗಳಾಗಿ ಕಂಗೊಳಿಸುತ್ತವೆ. ಅಂತೆಯೇ 'ಉರಿದ ಊರಿನವರು' ಕಥೆಯ ಬೈಲಳ್ಳಿ ಗ್ರಾಮ ಸಮಾಜವನ್ನು ಸೂಚಿಸುತ್ತದೆ. ಇಲ್ಲಿ ಬರುವ ಚೆಲುವಮ್ಮ, ಗೌರಿ, ಹಿರೇಗೌಡ್ರು, ಕೆಂಚಜ್ಜ ಇವರೆಲ್ಲ ಸಾಂಪ್ರದಾಯಿಕ ಪಾತ್ರಗಳಾಗಿ ಕಾಣಿಸುತ್ತಾರೆ.

ಲಂಕೇಶರ ಕಥೆಗಳೆಲ್ಲವೂ ಒಂದಕ್ಕೊಂದು ಸಂಬಂಧ ಇರುವ ಹಾಗೆ ಕಾಣುತ್ತದೆ. ಎಲ್ಲಾ ಕಥೆಗಳು ಒಂದೇ ನಿರ್ದಿಷ್ಟ ಸಮಾಜದ ಆಗುಹೋಗುಗಳಿಗೆ ಪ್ರತಿಸ್ಪಂದಿಸುತ್ತಾ ಇರುತ್ತವೆ. ಆದ್ದರಿಂದ ಲಂಕೇಶರ ಕಥಾವಲಯವನ್ನು ಬಿಡಿಬಿಡಿ ಘಟನೆಗಳನ್ನೊಳಗೊಂಡ ಕಾದಂಬರಿಯೊಂದರ ಸ್ವರೂಪದಲ್ಲೂ ಸಹ ಕಾಣಬಹುದು. ಹಾಗಾಗಿ ಲಂಕೇಶರ ಕಥಾವಲಯವು ಒಳಗೊಂಡಿರುವ ವ್ಯಕ್ತಿ ಸಮಾಜದ ಸಂಬಂಧದ ಸ್ಪಷ್ಟಾಸ್ಪಷ್ಟತೆಗಳನ್ನು ಸಂಶೋಧನೆಗೆ ಅಳವಡಿಸಿಕೊಳ್ಳಲು ಮುಂದಾಗಿರುವ ನಾನು ನವ್ಯ ಸಂದರ್ಭದ ಇನ್ನೆರಡು

ಕೃತಿಗಳನ್ನು ಇಲ್ಲಿ ಪ್ರಾತಿನಿಧಿಕವಾಗಿ ಚರ್ಚೆ ಮಾಡಲು ಇಷ್ಟಪಡುತ್ತೇನೆ. ಈ ಮೂಲಕ ಒಂದು ನಿರ್ದಿಷ್ಟ ಕಾಲಘಟ್ಟದ ಸಾಹಿತ್ಯದಲ್ಲಿ ಕಂಡುಬರುವ ವ್ಯಕ್ತಿ ಮತ್ತು ಸಮಾಜದ ಸ್ವರೂಪವನ್ನು ಹಿಡಿಯುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಸ್ವಲ್ಪಮಟ್ಟಿಗೆ ಕೈಗೊಳ್ಳಲಾಗಿದೆ. ಲಂಕೇಶರ ಸಮಕಾಲೀನರಾದಂತಹ ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿ ಹಾಗೂ ಯಶವಂತ ಚಿತ್ತಾಲರ 'ಮೂರು ದಾರಿಗಳು' ಕಾದಂಬರಿಯನ್ನು ಪರಿಶೀಲಿಸಲು ಈ ಸಂಪ್ರಬಂಧ ಮುಂದಾಗಿದೆ.

ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯಲ್ಲಿ ಗೊಡ್ಡು ಸಂಪ್ರದಾಯಗಳ ಹಾಗೂ ಅರ್ಥಹೀನ ಧಾರ್ಮಿಕ ಮೌಲ್ಯಗಳಿಂದ ಕೂಡಿದ ಹಳ್ಳಿಯನ್ನು ಕಾಣುತ್ತೇವೆ. ಶ್ರೇಷ್ಟ ಸಾಂಸ್ಕೃತಿಕ ಹಿನ್ನೆಲೆಯುಳ್ಳ ಇಲ್ಲಿನ ವೈದಿಕ ಧರ್ಮವು ಒಂದು ಹೆಣ್ಣನ್ನು ಸಕಾಲದಲ್ಲಿ ಸಂಸ್ಕಾರ ಮಾಡಲಾರದಂಥ ಸ್ಥಿತಿಯಲ್ಲಿದೆ. ವೇಶ್ಯೆ ಎನಿಸಿಕೊಂಡ ಚಂದ್ರಿಯ ಮಾನವೀಯ ಹಾಗೂ ವಾಸ್ತವಪ್ರಜ್ಞೆಯ ಮುಂದೆ ಇಲ್ಲಿಯ ಶ್ರೇಷ್ಟ ಅಧರ್ಮ ಕೀಳಾಗಿ ಕಾಣಿಸುತ್ತದೆ. ಇಂಥ ಸ್ಥಿತಿಯಲ್ಲಿ ಮೊದಲೇ ಮನಗಂಡಿದ್ದ ನಾರಣಪ್ಪ ಇದನ್ನೆಲ್ಲ ಧಿಕ್ಕರಿಸುವ ನವ್ಯಪ್ರಜ್ಞೆಯ ಅಸ್ತಿತ್ವವಾದಿಯಾಗಿದ್ದಾನೆ. ಆದರೆ ಇಂತಹ ಸಾಂಪ್ರದಾಯಿಕ ಮೌಲ್ಯಗಳ ಪ್ರತೀಕವೆಂಬಂತಿದ್ದ ಪ್ರಾಣೇಶಾಚಾರ್ಯರೇ ಚಂದ್ರಿಯ ತೋಳ್ತೆಕ್ಕೆಯಲ್ಲಿ ಹೆಣ್ಣಿನ ಸುಖ ಅನುಭವಿಸಿದಾಗ ಸಹ ಪ್ರಕೃತಿಯ ಜಯವನ್ನು ಕಾಣುತ್ತೇವೆ. ಇಲ್ಲಿ ಅರ್ಥಹೀನ ಸಂಸ್ಕೃತಿಯ ಅನುಕರಣೆ ಮತ್ತು ಗೊಡ್ಡು ಧರ್ಮವೊಂದರ ಒಡಕುಗಳನ್ನು ಅನಂತಮೂರ್ತಿಯವರು ವಿಮರ್ಶಿಸಿದ್ದಾರೆ. ಇದರ ಮೂಲಕ ಸಮಾಜಕೇಂದ್ರಿತ ದರ್ಶನವನ್ನು ನಮಗೆ ತೋರಿಸಿಕೊಟ್ಟಿದ್ದಾರೆ.

ಯಶವಂತ ಚಿತ್ತಾಲರ 'ಮೂರು ದಾರಿಗಳು' ಕಾದಂಬರಿಯಲ್ಲಿ ನಿರ್ಮಲೆಯ ಬಗ್ಗೆ ಒಂದು ಸುದ್ಧಿ ಹರಡುತ್ತದೆ. ಅಂದರೆ ಇವಳು ವಿವಾಹಪೂರ್ವ ಸಂಭೋಗಕ್ಕೆ ಕೈಹಾಕಿದಳೆಂಬುದು. ಹೀಗಾಗಿ ಇವಳು ಸಮಾಜದಲ್ಲಿನ ನಿಷೇಧಗಳನ್ನು ಮೀರುವ ಅಪವಾದಕ್ಕೆ ಗುರಿಯಾಗುವಳು. ಇದು ಮುಂದೆ ಒಂದು ಪ್ರಕರಣವಾಗಿ ಬೆಳೆದು ದೊಡ್ಡ ಸಮಸ್ಯೆಯಾಗುತ್ತದೆ. ಈ ವ್ಯಕ್ತಿಗತ ಸಮಸ್ಯೆಯೊಂದು ಸಮಾಜದ ಸಹಸ್ರ ನಾಲಿಗೆಗಳಲ್ಲಿ ಹೊರಳಾಡಿ ಹೊಸ ಬಣ್ಣಗಳನ್ನು ಪಡೆದುಕೊಳ್ಳುತ್ತದೆ. ಸ್ವತಃ ತಂದೆಯಾದವನೇ ತನ್ನ ಮನೆತನದ ಗೌರವಕ್ಕೆ ಧಕ್ಕೆ ಒದಗಿತೆಂದು ಕಳವಳವನ್ನು ಪಡುತ್ತಾನೆ. ಸತ್ಯವನ್ನು ಸರಿಯಾಗಿ ಅರಿಯಲಾರದೆ ದುಡುಕಿ ಮಗಳ ದುರಂತಕ್ಕೆ ಕಾರಣವಾಗುತ್ತಾನೆ. ಇಲ್ಲಿ ಗೌರವಸ್ಥರೆನಿಸಿಕೊಂಡವರಿಗೆ ಸಮಾಜದ ಬಗ್ಗೆ ಭೀತಿಯಿದೆ. ಇಲ್ಲಿ ನಿರ್ಮಲೆ ನಮ್ಮ

ಸಮಾಜದ ಈ ವೈರುಧ್ಯದ ಬದುಕಿನಿಂದ ಯಾತನೆಯನ್ನು ಅನುಭವಿಸಿ ಇದನ್ನು ಧಿಕ್ಕರಿಸಬೇಕು, ಇದರ ವಿರುದ್ಧ ಬಂಡೇಳಬೇಕು ಎನ್ನುವ ಯುವ ಜನಾಂಗದ ಪ್ರತಿನಿಧಿಯಾಗುತ್ತಾಳೆ. ಆದರೂ ಇಂಥ ಕ್ರೂರ ಸಮಾಜದಲ್ಲಿ ಬದುಕಲಾರದಂಥವಳಾಗುತ್ತಾಳೆ. ಜಡ್ಡುಗಟ್ಟಿದ ಸಾಂಸ್ಕೃತಿಕ ಹಿನ್ನೆಲೆಯ ಸಮಾಜದ ಜನರ ಬಾಯಿಗೆ ಸಿಕ್ಕಿ ದುರಂತವನ್ನಪ್ಪುತ್ತಾಳೆ.

ನವ್ಯ ಸಾಹಿತ್ಯ ಸಂದರ್ಭದ ಲೇಖಕರೆಲ್ಲರ ಧ್ಯೇಯ ಒಂದೇ ಎಂದು ಈ ಪ್ರಾತಿನಿಧಿಕ ಕೃತಿಗಳಿಂದ ತಿಳಿಯುತ್ತದೆ. ಹೀಗೆ ನವ್ಯದಲ್ಲಿ ನವೋದಯಕ್ಕಿಂತ ಭಿನ್ನವಾದ ಅರ್ಥಹೀನ ಮೌಲ್ಯಗಳನ್ನು, ಗೊಡ್ಡು ಸಂಪ್ರದಾಯಗಳನ್ನು ಒಳಗೊಂಡ ಹಳ್ಳಿಯನ್ನು ನೋಡುತ್ತೇವೆ. ಅದು ಬಲವಂತವಾಗಿ ಕಟ್ಟು ಕಟ್ಟಳೆಗಳನ್ನು, ನಿಷಿದ್ಧಗಳನ್ನು ವಿಧಿಸುವ ಹಳ್ಳಿ, ಅಲ್ಲಿ ಸಹಜ ಬಯಕೆಗಳನ್ನು ಹತ್ತಿಕ್ಕಿರುವ ಸಂಸ್ಕೃತಿಯನ್ನು ಕಾಣುತ್ತೇವೆ. ಹಾಗೆಯೇ ನಗರ ಪ್ರಜ್ಞೆಗೆ ಆಕರ್ಷಿತರಾಗಿ ಹಳ್ಳಿಯ ಈ ಎಲ್ಲವುಗಳನ್ನು ಅಸಹನೆಯಿಂದ ಕಾಣುವ, ನಿಷಿದ್ಧಗಳನ್ನು ಮೀರುವ ಬಂಡೇಳುವ ಪ್ರವೃತ್ತಿಯ ಹೊಸ ಪೀಳಿಗೆಯ ಯುವ ಜನಾಂಗವೊಂದು ಹಳೆಯ ತಲೆಮಾರಿನವರೊಂದಿಗೆ ಘರ್ಷಣೆಗೆ ಇಳಿದಿರುವ, ವಿವೇಕಹೀನವಾದ, ಹಿಂಸೆಯಿಂದ ಕೂಡಿದ ಗ್ರಾಮೀಣ ಪರಿಸರವೊಂದನ್ನು ನವ್ಯರಲ್ಲಿ ಕಾಣುತ್ತೇವೆ.

ಒಟ್ಟಾರೆ ನವ್ಯರಲ್ಲಿ ಮಡಿವಂತರೆನಿಸಿಕೊಂಡವರನ್ನು, ಸಭ್ಯರೆನಿಸಿಕೊಂಡವರನ್ನು ಬೆಚ್ಚಿಬೀಳಿಸುವ ಗುಣವಿದೆ. ಎಲ್ಲವನ್ನು ಸಂದೇಹಿಸುವ, ಪ್ರಶ್ನಿಸುವ, ದಂಗೆ ಏಳುವ ಪ್ರವೃತ್ತಿ ಇದೆ. ಇದರ ಜೊತೆಗೆ ಸಾಂಕೇತಿಕವಾಗಿ ದ್ವಂದ್ವಗಳನ್ನೊಳಗೊಂಡು ಕ್ರಿಯಾತ್ಮಕವಾಗಿ ವ್ಯಂಗ್ಯವನ್ನು ಕೈಬಿಡದೆ ಬರೆಯುವ ಕಥನ ಕಲೆಯಿದೆ. ಹೀಗೆ ಹಳ್ಳಿಯನ್ನು ಸಮಗ್ರವಾಗಿ ಸಂದೇಹಿಸುವ ದೃಷ್ಟಿಕೋನ ನವ್ಯದಲ್ಲಿ ಪ್ರಧಾನವಾಗಿದೆ. ಅಸ್ತಿತ್ವವಾದದ ಹಿನ್ನೆಲೆಯಲ್ಲಿ ಕಥನ ರಚಿಸುವ ಲಂಕೇಶರ ಕಥೆಗಳಲ್ಲೂ ಈ ಎಲ್ಲಾ ಅಂಶಗಳು ಮಡುಗಟ್ಟಿ ನಿಂತಿವೆ.

### ೨.೧ ಸಮಾಜ ಮತ್ತು ವ್ಯಕ್ತಿ ನಡುವಿನ ಸಂಬಂಧಗಳು :

"The central doctrine is that man is what he make of himself : he is not predestined by a God, or by society, or by biology. he has a free will and the responsibility which goes with it, if he refuses to choose or lets outside forces determine him. He is contemptible. Hence the

literary works of existentialism insist on actions - including acts of will as the determining things."[೪]

ವ್ಯಕ್ತಿಯ ತನ್ನ ಇರುವಿಕೆಗೆ ತಾನೇ ಕಾರಣ ಬದಲಿಗೆ ದೇವರಲ್ಲ, ಸಮಾಜವೂ ಅಲ್ಲ, ಜೀವಶಾಸ್ತ್ರವಲ್ಲ ಎಂಬುದು ಅಸ್ಥಿತ್ವವಾದದ ತತ್ವ. ಈ ಅಸ್ಥಿತ್ವವಾದದ ಹಿನ್ನೆಲೆಯಲ್ಲಿ ಕಥೆಗಳನ್ನು ಬರೆದ ಲೇಖಕರು ಲಂಕೇಶ್‌ರವರು. ಅಸ್ಥಿತ್ವವಾದದ ವಿವಿಧ ಎಳೆಗಳು ಲಂಕೇಶರ ಕಥೆಗಳಲ್ಲಿ ಕಾಣಿಸುತ್ತವೆ.

ವ್ಯಕ್ತಿ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳು ಒಂದನ್ನೊಂದು ಅವಿನಾಭಾವ ಸಂಬಂಧ ಹೊಂದಿವೆ. ವ್ಯಕ್ತಿಯನ್ನು ಹೊರತುಪಡಿಸಿ ಸಮಾಜವನ್ನಾಗಲಿ, ಸಮಾಜವನ್ನು ಹೊರತುಪಡಿಸಿ ವ್ಯಕ್ತಿಯನ್ನಾಗಲಿ ಕಲ್ಪಿಸುವುದು ಅಸಾಧ್ಯ. ಹೀಗೆ ಅನ್ಯೋನ್ಯ ಸಂಬಂಧ ಹೊದಿರುವ ಈ ಎರಡು ಪರಿಕಲ್ಪನೆಗಳು ನವ್ಯ ಕಾಲಕ್ಕೆ ಕಥಾವಸ್ತುಗಳಾದವು. ಇವೆರಡರ ಸಂಬಂಧಗಳಿಗೆ ಹೊಸ ದೃಷ್ಟಿಕೋನವನ್ನು ಕೊಡುವಲ್ಲಿ ಹೊಸ ವ್ಯಕ್ತಿ ಹೊಸ ಸಮಾಜದ ನಿರ್ಮಾಣದಲ್ಲಿ ಲಂಕೇಶರ ಕಥೆಗಳದ್ದು ಸಿಂಹಪಾಲು.

ಲಂಕೇಶರ ಕಥೆಗಳಲ್ಲಿ ಹಲವು ಬಗೆಯ ಸಮಾಜಗಳು, ಹಲವು ಬಗೆಯ ವ್ಯಕ್ತಿಗಳು ಕಂಡುಬರುತ್ತಾರೆ. ಗ್ರಾಮ/ನಗರ, ಸ್ಪೃಶ್ಯ/ಅಸ್ಪೃಶ್ಯ ಎಂಬ ಸಮಾಜಗಳು ವಿದ್ಯಾವಂತ/ ಅವಿದ್ಯಾವಂತ ಎಂಬ ವ್ಯಕ್ತಿಗಳು ಬರುತ್ತಾರೆ. ಈ ಸಮಾಜಗಳು ಮತ್ತು ವ್ಯಕ್ತಿಗಳ ನಡುವೆ ಅಂತರ ಏರ್ಪಡುವುದನ್ನು ಕಥೆಗಳಲ್ಲಿ ಕಾಣಬಹುದು. ಒಬ್ಬರಿಂದೊಬ್ಬರಿಗೆ ಈ ಕಾರಣಗಳಿಂದಲೇ ಮನಸ್ತಾಪಗಳು ಮೂಡುತ್ತವೆ. ಆದರೆ ಎಲ್ಲಿಯೂ ವಿಕೋಪದ ಸ್ಥಿತಿ ಬರುವುದಿಲ್ಲ.

ಸಮಾಜ ಮತ್ತು ವ್ಯಕ್ತಿ ನಡುವೆ ಅಂತರವನ್ನು ತಂದಿರುವುದು ವಿದ್ಯಾಭ್ಯಾಸ. ಇಲ್ಲಿ ಇವೆರಡರ ನಡುವೆ ವಿದ್ಯಾಭ್ಯಾಸ ಮಧ್ಯವರ್ತಿಯಾಗಿ ಕೆಲಸ ನಿರ್ವಹಿಸುತ್ತದೆ. ಆಧುನಿಕ ವಿದ್ಯಾಭ್ಯಾಸ ಪಡೆದ ನವ ತರುಣರು ಬದಲಾವಣೆಯ ಹರಿಕಾರರಾಗುತ್ತಾರೆ. ವಿದ್ಯೆ ಕಲಿತು ನಗರ ಸಂವೇದನೆಯನ್ನು ವಿಜೃಂಭಿಸುವ ಮೂಲಕ ನಾಗರೀಕ ಸಂಸ್ಕೃತಿಯ ಬಿಂಬವನ್ನು ವ್ಯಕ್ತಪಡಿಸುತ್ತಾರೆ. ತಲೆಮಾರುಗಳಿಂದ ಇದ್ದಂತಹ ಪ್ರಶ್ನೆಗಳನ್ನು ಪ್ರಶ್ನಿಸುತ್ತಾರೆ. ಶಿಕ್ಷಣ ಎಲ್ಲರಿಗೂ ವಿಶ್ವಾಸ, ನೆಮ್ಮದಿ ತರುವುದರ ಜೊತೆಗೆ ಒಂದು ರೀತಿಯ ತಳಮಳವನ್ನು

---

[೪] The Readers Companion to World Literature" : Ed: Calvin s Brown : Amentor Book, New American Library, New York, 1984 (Pp.183-184).

ಹೆಚ್ಚಿಸುತ್ತದೆ. ಕ್ರಾಂತಿಕಾರಕ ಬೆಳವಣಿಗೆಗಳನ್ನು ಬಯಸುವ ಮುಖವನ್ನು ಕಥೆಗಳಲ್ಲಿ ಆಧುನಿಕ ಸಮಾಜದಲ್ಲಿ ಹಲವಾರು ವ್ಯಕ್ತಿಗಳು ತೋರಿಸಿಕೊಡುತ್ತಾರೆ.

ಉದಾಹರಣೆಗೆ : * ಶಿವಮೊಗ್ಗದಲ್ಲಿ ವಿದ್ಯಾಭ್ಯಾಸ ಮಾಡಿದ ಉಮಾಪತಿ.

* ರೊಟ್ಟಿ ಕಥೆಯಲ್ಲಿ ಆಕೆ ಕಂಡ ರೈಲ್ವೆ ಸ್ಟೇಷನ್ನು.

* ಕೆರೆಯ ನೀರನು ಕೆರೆ ಚೆಲ್ಲಿ ಕಥೆಯಲ್ಲಿಯ ಪರಮೇಶ

ಮುಂತಾದವು.

ಅದೇ ರೀತಿ ಗ್ರಾಮ ಸಮಾಜದಲ್ಲಿ ಬದುಕಿರುವ ವ್ಯಕ್ತಿಗಳೂ ಸಹ ಸಮಾಜದ ಜಡ್ಡುಗಟ್ಟಿದ ಮೌಲ್ಯಗಳಿಗೆ ಶರಣಾಗದೇ ಸಮಾಜವನ್ನು ಸೂಕ್ಷ್ಮ ಕಣ್ಣುಗಳಿಂದ ನೋಡುವ ಮೂಲಕ ಗ್ರಾಮಸಂವೇದನೆಗೆ ಹೊಸ ಅರ್ಥ ನೀಡಿದ್ದಾರೆ. ಪರಂಪರೆಯಿಂದ ಬಂದಿರುವ ಮೌಲ್ಯಗಳಿಗೆ ಕಣ್ಣು ಮುಚ್ಚಿಕೊಂಡು, ಕುರುಡರಾಗಿ ಪ್ರತಿಕ್ರಿಯಿಸುವ ಜಾಯಮಾನಕ್ಕಿಂತಲೂ ವಿಭಿನ್ನರಾಗಿ ಕಾಣಿಸುತ್ತಾರೆ. ಸಮಾಜವನ್ನು ಯಥಾವತ್ತಾಗಿ ಇರುವ ಹಾಗೆ ಸ್ವೀಕರಿಸುವ ಅಥವಾ ಸ್ವೀಕರಿಸಲು ಬೇರೆಯವರಿಗೆ ಒತ್ತಡ ಏರುವ ಪಟ್ಟಭದ್ರಹಿತಾಸಕ್ತಿಗಳಂತೆ ಕಥೆಗಳಲ್ಲಿ ಗ್ರಾಮದಲ್ಲಿನ ಪಾತ್ರಗಳು ಗೋಚರಿಸುವುದಿಲ್ಲ. ಬದಲಿಗೆ ಅನಿಷ್ಟ ಪದ್ಧತಿಗಳ ನಿರ್ಮೂಲನಕ್ಕೆ ಹರಸಾಹಸ ತೋರಿಸುವ ದಿಟ್ಟ ಪಾತ್ರಗಳು ಕಥೆಗಳಲ್ಲಿ ಕಾಣಸಿಗುತ್ತದೆ.

ಉದಾ : ಬೈಲಳ್ಳಿಯ ದಿಟ್ಟ ಹೆಣ್ಣಾದ ಚೆಲುವಮ್ಮ.

ಅಮೃತಾಂಬುಧಿಯ ಮುಗ್ಧ ಮನುಷ್ಯನಾದ ಮಲ್ಲಯ್ಯ ಮುಂತಾದವರು.

"ಸಿಂಗಾರಪೇಟೆಯ ಸ್ಟೇಷನ್‌ನಲ್ಲಿ ವಾರದ ಕೆಳಗೆ ರೈಲಿನಿಂದ ಇಳಿದಾಗ ಆಕೆ ಸರಿಯಾಗಿ ಗಮನಿಸಿರಲ್ಲಿಲ್ಲ: ಅತ್ತಿಂದಿತ್ತ ಇತ್ತಿಂದತ್ತ ಓಡಾಡುವ ಕೂಲಿಗಳು, ಹರಿದ ಬಟ್ಟೆ, ಕೊಳಕು ಮೈ, ಕಂಕುಳಲ್ಲಿ ಮಕ್ಕಳು, ಸ್ಟೇಷನ್ನಿನ ತುಂಬ ಇಂಥವರು; ಗೋಡೆಗಳ ಮೇಲೆಲ್ಲ ತನಗೆ ಅರ್ಥವಾಗದ ಬಣ್ಣದ ಚೀಟಿಗಳು, ಬೈದಾಟಗಳು. ಸ್ಟೇಷನ್ನಿಗೆ ಹಿಂಭಾಗಕ್ಕೆ ಒತ್ತಿಟ್ಟಿಂದ, ನೆಲದಿಂದ ಆಕಾಶದ ತನಕ ಹೊಗೆ: ಊರೊಳಗೆ ಹೋದರೆ ಹತ್ತಾರು ಮೆರವಣಿಗೆ. ಅಂಥ ಮೆರವಣಿಗೆಯ ಬ್ಯಾನರು ಬೋರ್ಡುಗಳನ್ನು ತಿಳಿಯಲು ಯತ್ನಿಸಿದಳು, ಸಾಧ್ಯವಾಗಲಿಲ್ಲ."[೫೫]

---

[೫೫] ಲಂಕೇಶ್, ಪಿ., "ಪಿ. ಲಂಕೇಶ್ ಅವರ ಆಯ್ದ ಕಥೆಗಳು", ಅಕ್ಷರ ಪ್ರಕಾಶನ (ಸಾಗರ) ಹೆಗ್ಗೋಡು, ಕರ್ನಾಟಕ, ೨೦೦೬ (ಪು.೨೬–೩೧).

ಇಲ್ಲಿ ನಗರ ಸಮಾಜ, ಅಲ್ಲಿನ ರೀತಿ–ನೀತಿಗಳು, ಬದುಕಿನ ಕ್ರಮ ಎಲ್ಲವೂ ಸ್ಪಷ್ಟವಾಗಿ ಕಣ್ಣಮುಂದೆ ಬರುವಂತೆ ಚಿತ್ರಿತವಾಗಿದೆ. ಅಂದರೆ ನಗರ ಸಂಸ್ಕೃತಿ ಜನರು ತುಂಬ ವೇಗದ ಜೀವನ ನಡೆಸುತ್ತಾರೆ. ಯಾರ ಬಗ್ಗೆಯೂ ವಿಶೇಷ ಕಾಳಜಿ ವಹಿಸುವುದಿಲ್ಲ. ಸ್ವಾರ್ಥ ಜೀವಿಗಳು ಎಂಬುದು ಈ ದೃಶ್ಯದಿಂದ ತಿಳಿಯುತ್ತದೆ. ಆ ವ್ಯಕ್ತಿಯನ್ನು ಆ ರೀತಿ ಪರಿವರ್ತಿಸಿದ್ದು ಅವನ ತಿಳುವಳಿಕೆಯೇ ಹೊರತು ಸಮಾಜವಲ್ಲ, ವ್ಯಕ್ತಿಗಳು ಹಾಗೆ ಇರುವುದಕ್ಕೆ ಸಮಾಜ ಹಾಗೆ ಕಾಣುತ್ತಿದೆ ಅಷ್ಟೇ.

"ಅದೊಂದು ವೀರಾವೇಶದ, ಮಾರಾಮಾರಿಯ ಊರು. ಹೆಂಡತಿ ವ್ಯಭಿಚಾರ ಮಾಡಿದರೆ ಗಂಡನ ವಾದವಾಗಲಿ, ಗುಪ್ತವಾಗಿ ವ್ಯಸನ ಪಡುವುದಾಗಲಿ ಆ ಊರಲ್ಲಿ ಇರಲಿಲ್ಲ; ವ್ಯಭಿಚಾರ ಮಾಡಿದವಳು ಮತ್ತು ಆಕೆಯ ಪ್ರಿಯಕರ ಇಬ್ಬರ ಕೊಲೆಯೂ ಒಂದೇ ಗಳಿಗೆಯಲ್ಲಿ ಆಗುತ್ತಿತ್ತು. ಕೊಟ್ಟ ಹಣ ಹಿಂತಿರುಗಿಸದೆ ಇದ್ದರೆ ಕೂಡ. ಕಂಬಕ್ಕೆ ಕಟ್ಟಿ ಹೊಡೆದು ಜೀತ ಮಾಡಿಸುವುದು, ಸಂಪ್ರದಾಯ ಕುಟುಂಬಗಳ ಜಿದ್ದು ಹಾಗೆಯೇ, ಎರಡರಲ್ಲಿ ಒಂದು ಕುಟುಂಬ ದಫನ್ ಆದಂತೆಯೇ. ಪಂಚಾಯಿತಿಗಳೆಂದರೆ ತಪ್ಪು ಮಾಡಿದವರನ್ನು ಬೆಂಕಿಗೆ ಇಕ್ಕುವ ಸಂದರ್ಭಗಳು ಇಂಥ ಊರು ಅದು. ಅದರ ಹೆಸರು ಅಮೃತಾಂಬುಧಿ..."[೬]

ಹಿಂದೆ ಹೇಳಿದಂತೆ ಸಿಂಗಾರಪೇಟೆ ಸ್ಟೇಷನ್ನು ನಗರ ಜೀವನಕ್ರಮವನ್ನು ವ್ಯಕ್ತಪಡಿಸಿದರೆ 'ಕಲ್ಲು ಕರಗುವ ಸಮಯ' ಕಥೆಯ ಈ ಭಾಗ ಗ್ರಾಮಜೀವನ ಕ್ರಮವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ಪ್ರತಿಯೊಬ್ಬರು ಊರಿಗೆ ಮುಖ್ಯರು. ಆ ಊರಿನ ಕಟ್ಟುಪಾಡುಗಳಿಗೆ ಸದಾ ಬದ್ಧರು. ಎಲ್ಲಿಯೂ ಮೀರಲು ಮುಂದಾಗದವರು, ಮುಂದಾದರೂ ಕ್ರಾಂತಿ ಮಾಡದೇ ತುಂಬಾ ಚಾಣಾಕ್ಷತನದಿಂದ ಮುನ್ನುಗ್ಗಿ ಪರಿವರ್ತನೆ ತರುವ ಸ್ವಭಾವದವರು. ಮಲ್ಲಯ್ಯನಂಥವರು. ಇಂತಹ ಅಮೃತಾಂಬುಧಿ ಊರಿಗೆ ಹಿರಿಯರು ಮತ್ತು ನ್ಯಾಯ ಕೊಡುವ ದೇವರಾಗಿದ್ದರು.

ಈ ಎರಡು ಭಾಗಗಳಲ್ಲಿರುವ ವೈರುಧ್ಯಗಳು ನಗರ–ಗ್ರಾಮ ಸಮಾಜಗಳನ್ನು ಬಿಂಬಿಸುತ್ತಿದೆ. ಆಯಾ ವ್ಯಕ್ತಿಗಳ ಸಾಂಸ್ಕೃತಿಕ ಸಂದರ್ಭಗಳ ಹಿನ್ನಲೆಗಳು ಸಮಾಜ ನಿರ್ಮಾಣಕ್ಕೆ ಕಾರಣವಾಗಿವೆ ಎಂಬುದು ಇಲ್ಲಿ ಕಂಡುಬರುವ ಸತ್ಯಾಂಶವಾಗಿದೆ. ಯಾವುದೇ ವ್ಯಕ್ತಿಯ ವ್ಯಕ್ತಿತ್ವ ಆಯಾ ಸಮಾಜದ ಬದಲಾವಣೆಯಲ್ಲಿ ಪರಿವರ್ತನೆಯಾಗುವುದಿಲ್ಲ.

---

[೬] "ಕಲ್ಲು ಕರುಗುವ ಸಮಯ ಮತ್ತು ಇತರ ಕಥೆಗಳು", ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭ (ಪು.೮೮–೧೦೪).

ವ್ಯಕ್ತಿಗಳ ನಿಲುವು, ಧೋರಣೆಗಳು ಸಮಾಜವನ್ನು ನಿಯಂತ್ರಿಸುತ್ತವೆ, ಕಟ್ಟಬಯಸುತ್ತವೆ ಎಂಬುದು ಕಥೆಗಳಲ್ಲಿ ಸಾಬೀತಾಗುವ ಮತ್ತೊಂದು ಪ್ರಮುಖಾಂಶವಾಗಿದೆ.

ಹೀಗೆ ಲಂಕೇಶರ ಕಥೆಗಳಲ್ಲಿ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧಗಳನ್ನು ಗಮನಿಸಬಹುದು.

ಅಧ್ಯಾಯ-೩

# ಲಂಕೇಶರ ಕಥೆಗಳಲ್ಲಿ ಬರುವ 'ವ್ಯಕ್ತಿ'ಯ ವಿವಿಧ ರೂಪಗಳು

## ೩.೧ 'ವ್ಯಕ್ತಿ'ಯ ವಿವಿಧ ರೂಪಗಳು :

ಲಂಕೇಶರು ಕಥೆಗಳಲ್ಲಿ ಕಥೆಯನ್ನು ಎಚ್ಚರಿಕೆಯಿಂದ ನಿರ್ವಹಿಸುವುದು ಮತ್ತು ಸಂಕೇತವನ್ನು ಬಳಸುವುದು ಕಂಡುಬರುತ್ತದೆ. ಸಾಮಾನ್ಯ ಅನುಭವವನ್ನು ಆಧರಿಸಿ ಕಥಾಂಶವೇ ಇಲ್ಲವೇನೋ ಎಂಬಂತೆ ಬೆಳೆಸಿ ಕ್ರಮೇಣ ಅರ್ಥಕಟ್ಟಿಕೊಡುವುದು ಇವರ ರೀತಿ (ಕಲ್ಲು ಕರಗುವ ಸಮಯ, ರೊಟ್ಟಿ) ಈ ಅಂಶ ಲಂಕೇಶರ ಅನೇಕ ಕಥೆಗಳಲ್ಲಿ ಸಾಬೀತಾಗಿದೆ. ಲಂಕೇಶರು ತಮ್ಮ ಕಥೆಗಳಲ್ಲಿ ತೀವ್ರತೆ ಮತ್ತು ನೈತಿಕತೆಯನ್ನು ಒಟ್ಟಾರೆ ನೋಡುವ ಪ್ರಯತ್ನ ಮಾಡಿದ್ದಾರೆ ಎಂಬುದು ಕಥೆಗಳ ಓದಿನಿಂದ ತಿಳಿಯುತ್ತದೆ. ಲಂಕೇಶರ ಬಗ್ಗೆ ಅನಂತಮೂರ್ತಿಯವರು ಹೀಗೆ ಹೇಳುತ್ತಾರೆ.

"ಮನುಷ್ಯನ ವರ್ತನೆಗೆ ಸಂಬಂಧಪಟ್ಟ ಸಾಚ-ಮೋಸಗಳನ್ನು ಅತ್ಯಂತ ನಿಷ್ಠುರವಾಗಿ ವಿಶ್ಲೇಷಿಸಬಲ್ಲ ಲಂಕೇಶರ ಪ್ರತಿಭೆ, ಮುಖ್ಯವಾಗಿ ನೈತಿಕವಾದದ್ದು, ಭಾವನೆಗಳನ್ನು ಮೋಸವಿಲ್ಲದೇ ಗದ್ಯದಲ್ಲಿ ಪ್ರಾಮಾಣಿಕವಾಗಿ ಚಿತ್ರಿಸಬಲ್ಲ ಇವರು ಕನ್ನಡದಲ್ಲಿ ಅಗ್ರಪಂಕ್ತಿಯಲ್ಲಿ ನಿಲ್ಲುವ ಲೇಖಕರು..."[೭]

ಈ ಮಾತುಗಳು ಲಂಕೇಶರ ಪ್ರತಿಭಾ ಸಾಮರ್ಥ್ಯವನ್ನು, ವಿದ್ವತ್ತನ್ನು ಗುರುತಿಸಿದಂತಿದೆ. ಈ ನೆಲೆಗಟ್ಟಿನಲ್ಲಿ ಲಂಕೇಶರ ಕಥನ ಸಾಹಿತ್ಯದಲ್ಲಿ ಬರುವ ವ್ಯಕ್ತಿಗಳ ವಿವಿಧ ರೂಪಗಳನ್ನು ನೋಡಬಹುದು.

ಲಂಕೇಶರ ಕಥೆಗಳಲ್ಲಿ ಬರುವ ವ್ಯಕ್ತಿಗಳು ಎರಡು ಬಗೆಯಲ್ಲಿ ಮುಖ್ಯರಾಗುತ್ತಾರೆ.

೧. ಆಧುನಿಕ ಸಂವೇದನೆಯ ತರುಣ ಪಾತ್ರಗಳು,

೨. ಸಾಂಪ್ರದಾಯಿಕ ಮೌಲ್ಯಗಳ ಚೌಕಟ್ಟಿನಲ್ಲಿ ಬದುಕುತ್ತಿದ್ದರೂ' ಸೂಕ್ಷ್ಮ ಮನಸ್ಥಿತಿಯ ವ್ಯಕ್ತಿಗಳು.

---

[೭] 'ಪ್ರಜ್ಞೆ ಮತ್ತು ಪರಿಸರ', ಅನಂತಮೂರ್ತಿ, ಯು.ಆರ್., ಅಕ್ಷರ ಪ್ರಕಾಶನ, ಪು.೯೦.

ಈ ಎರಡು ಬಗೆಯ ವ್ಯಕ್ತಿಗಳ ಹುಡುಕಾಟವನ್ನು ಪ್ರಸ್ತುತ ಪ್ರಬಂಧದಲ್ಲಿ ಲಂಕೇಶರ ಆಯ್ದ ಕಥೆಗಳನ್ನಿಟ್ಟುಕೊಂಡು ಚರ್ಚಿಸಲು ಈ ಅಧ್ಯಯನ ಪ್ರಬಂಧ ಮುಂದಾಗಿದೆ.

### ೩.೧.೧ ಸ್ಕಾಲರ್‌ಶಿಪ್ ಯಾತ್ರೆಯ ಉಮಾಪತಿ :

ಲಂಕೇಶರ ಕಥೆಗಳಲ್ಲಿ ಬರುವ ಆಧುನಿಕ ಸಂವೇದನೆಯ ತರುಣ ಪಾತ್ರಗಳ ಸಾಲಿನಲ್ಲಿ ಉಮಾಪತಿ ಮತ್ತು ಸಂಧ್ಯ ಮುಖ್ಯರಾಗಿ ಕಾಣಿಸುತ್ತಾರೆ. ಬದಲಾದ ಸಮಾಜದ ಗರ್ಭದಲ್ಲಿ ಉಂಟಾಗಿರುವ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಸೃಷ್ಟಿಸುತ್ತಿರುವ ಹೊಸ ವ್ಯಕ್ತಿಗಳಲ್ಲಿ ಉಮಾಪತಿ ಹೊರತಲ್ಲ. ಆಧುನಿಕತೆಯನ್ನು ಹಂಬಲಿಸುವ ಅಳವಡಿಸಿಕೊಳ್ಳಲು ತುದಿಗಾಲಲ್ಲಿ ನಿಂತಿರುವ ಸೆನ್ಸಿಟಿವ್ ವ್ಯಕ್ತಿ ಉಮಾಪತಿ. ಆಧುನಿಕತೆಯ ಪರಿವೆಯೇ ಇಲ್ಲದೇ ಬದುಕನ್ನು ಸಹಜ ಮತ್ತು ಅನಿವಾರ್ಯವೆಂಬಂತೆ ಸ್ವೀಕರಿಸುವ ಅವಿದ್ಯಾವಂತ ಹಳ್ಳಿಗರಾದ ಉಮಾಪತಿಯ ತಾಯಿ ಈರವ್ವ ಮತ್ತು ಅಕ್ಕ ಲಿಂಗಿ. ಇದರ ಮಧ್ಯೆ ಆಧುನಿಕತೆ ಮತ್ತು ಸಾಂಪ್ರದಾಯಿಕತೆಯ ಮಧ್ಯೆ ತೊಳಲಾಡುವ ನಿಂಗೇಗೌಡ. ಈ ಮೂರು ರೀತಿಯ ಪಾತ್ರಗಳು ಮುಖಾಮುಖಿಯಾದಾಗ ಉಂಟಾಗುವ ಪಲ್ಲಟಗಳನ್ನು "ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ" ಕಥೆಯೂ ಬಿಚ್ಚಿಡುತ್ತದೆ.

ಉಮಾಪತಿ ಹುಟ್ಟಿ ಬೆಳೆದಿದ್ದು ಹಳ್ಳಿಯಲ್ಲಿಯೇ ಆದರೂ ಶಿಕ್ಷಣ ಪಡೆದು ಹೊಸ ಸಂವೇದನಾ ಲಹರಿಯನ್ನು ಅಳವಡಿಸಿಕೊಂಡವನು. ಸಮಾಜದ ಬದಲಾವಣೆಯನ್ನು ಬಯಸುವವನು. ಈತ ಕಿಶೋರಾವಸ್ಥೆಯಿಂದ ಹರೆಯದ ಪ್ರಬುದ್ಧತೆಯತ್ತಾ ಸಾಗುವ ಮುಗ್ಧ ಯುವಕ. ಸಮಾಜವನ್ನು ತೆರೆದ ಕಣ್ಣುಗಳಿಂದ ಮುಗ್ಧವಾಗಿಯೇ ಸುತ್ತಲಿನ ಪ್ರತಿಯೊಂದನ್ನು ಗಮನಿಸುವ, ಆಳವಾಗಿ ಯೋಚಿಸುವ, ವಿವರವಾಗಿ ತಿಳಿಯುವ ಕುತೂಹಲದ ವ್ಯಕ್ತಿ. ಹೀಗೆ ಗಮನಿಸುವಾಗ ಆತನಿಗೆ ಮಾನಸಿಕ ಗೊಂದಲ, ತೊಳಲಾಟಗಳು ಸಂಭವಿಸಿದ್ದು ಉಂಟು.

"ಈತನಿಗೆ ತನ್ನ ಮನೆಯ ಕೋಳಿ ಮೊಟ್ಟೆ ಇಟ್ಟು ಮರಿ ಮಾಡುವುದನ್ನು ವಿವರವಾಗಿ ತಿಳಿಯುವ ಆಸೆ. ಹಾಗೆಯೇ ಹಿತ್ತಲ ತಿಪ್ಪೆಯ ಹತ್ತಿರ ಬೆಳೆದು ನಿಂತ ವಿವಿಧ ಜಾತಿಯ ಗಿಡಗಳು ಹೂವರಳಿಸಿ ಕಾಯಿ ಬಿಡುವುದರ ಬಗ್ಗೆ ಕುತೂಹಲ".[೮] ಇಂತಹ ಗ್ರಾಮೀಣ

---

[೮] ಪಿ. ಲಂಕೇಶ್‌ರವರ ಆಯ್ದ ಕಥೆಗಳು, ಲಂಕೇಶ್, ಪಿ., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬, ಪು.೪೧–೫೬.

ಮುಗ್ಧತೆಯ ಉಮಾಪತಿ ತನ್ನವರ ದೃಷ್ಟಿಯಲ್ಲಿ ಇನ್ನು ಚಿಕ್ಕವನಾಗಿಯೇ ಕಂಡುಬಂದರೂ ಅವನ ಪ್ರಜ್ಞೆಯು ಕ್ರಮೇಣ ಬೆಳವಣಿಗೆಯಾಗಿರುವುದನ್ನು ಕತೆಯಲ್ಲಿ ಕಾಣಬಹುದು. ಎಲ್ಲವೂ ಅರ್ಥವಾಗತೊಡಗಿದೆ. ಆದ್ದರಿಂದಲೇ ಉಮಾಪತಿಯ ಅಕ್ಕ ಈತ ಇನ್ನು ಚಿಕ್ಕವನೇನೋ ಎಂಬಂತೆ ಆತನ ಎದುರಿನಲ್ಲಿ "ಕುಪ್ಪಸ ತೆಗೆದು ಸೀರೆ ಉಡುತ್ತಾಳೆ. ಉಟ್ಟ ಸೀರೆ ಉಗುಚಿ ಪಕ್ಕದಲ್ಲಿದ್ದ ಸೀರೆ ಎತ್ತಿಕೊಂಡು ನಿಧಾನಕ್ಕೆ ನಿರಿಗೆ ಹಾಕುತ್ತಾ ಉಡುತ್ತಾಳೆ."[೯] ಇದನ್ನೆಲ್ಲಾ ಕಂಡ ಉಮಾಪತಿಗೆ ನಾಚಿಗೆ, ಬೆಳೆದ ಅವನ ಬುದ್ಧಿಗೆ ಕೋಪ, ಉಮಾಪತಿ, ತನ್ನ ತಾಯಿ ಈರವ್ವ, ಅಕ್ಕ ಲಿಂಗಿ ಈ ಮೂರು ಜನರಿರುವ ಯಜಮಾನರಿಲ್ಲದ ಈ ಕುಟುಂಬಕ್ಕೆ ನಿಂಗೇಗೌಡನ ಪ್ರವೇಶವನ್ನು ಉಮಾಪತಿ ಖಂಡಿಸುತ್ತಾನೆ. ನಿಂಗೇಗೌಡ ಅರ್ಥವಾಗದ ಮಾತುಗಳಿಗೆ ಒಳಗೊಳಗೇ ರೇಗುತ್ತಾನೆ. ತನ್ನ ಅಕ್ಕನ ಮೈಮುಟ್ಟಿ ಕೆನ್ನೆ, ಕಿವಿ ಹಿಂಡುವ ನಿಂಗೇಗೌಡನ ಕಪಾಳಕ್ಕೆ ಹೊಡೆಯಬೇಕೆನಿಸುತ್ತದೆ. ಆಧುನಿಕ ನೆಲೆಯಲ್ಲಿ ನಿಂತು ಪ್ರಬುದ್ಧತನದಿಂದ ಹೊಸತನದಿಂದ ಸಂವೇದಿಸಲು ಹೊರಟಿರುವ ಉಮಾಪತಿಯಿಂದ ಮಾತ್ರ ಈ ರೀತಿಯ ಪ್ರತಿಕ್ರಿಯೆ ಸಾಧ್ಯ. ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಬದುಕನ್ನು ಅನಿವಾರ್ಯವೆಂಬಂತೆ ಸ್ವೀಕರಿಸುವ ಉಮಾಪತಿಯ ತಾಯಿ ಮತ್ತು ಅಕ್ಕ ಸಮಾಜವನ್ನು ಆಳಕ್ಕೆ ಇಳಿದು ನೋಡುವುದಿಲ್ಲ. ಆದರೆ ವಿದ್ಯಾವಂತ ಪ್ರೌಢಶಾಲೆಗೆ ದಾಖಲಾಗಿರುವ ಉಮಾಪತಿ ತನ್ನ ತಾಯಿ, ಅಕ್ಕ, ನಿಂಗೇಗೌಡನ ಜೊತೆ ದಾರಿಯಲ್ಲಿ ಹೋಗುವಾಗ "ದೊಂಬರ ಹುಡುಗ ಸಹ ನಿಂಗೇಗೌಡ ನಿನ್ನ ಚಿಕ್ಕಪ್ಪನೋ ಮಾವನೋ ಆಗಬೇಕಲ್ಲವಾ?" ಅಂದಿದ್ದ. ಹೀಗೆ ಊರ ಜನ ಇವರ ಮನೆಯೊಂದಿಗೆ ಕೆಟ್ಟ ಸಂಬಂಧ ಕಲ್ಪಿಸಿ ನಗುತ್ತಿದ್ದರು."[೧೦] ಈ ಎಲ್ಲಾ ಸಂದರ್ಭಗಳಲ್ಲಿ ಉಮಾಪತಿ ತನ್ನ ಮುಗ್ಧತೆಯನ್ನು ಮೀರಿ ಸೂಕ್ಷ್ಮವಾಗಿ ಕಂಪಿಸುತ್ತಾನೆ. ಮನಸ್ಸಿನಲ್ಲಿ ನೋವುಣ್ಣುತ್ತಾನೆ. ಈ ಕಥೆಯಲ್ಲಿ ಬರುವ ವ್ಯಕ್ತಿಗಳ ವಿವಿಧ ರೂಪಗಳ ಆಧುನಿಕ ನೆಲೆಯಲ್ಲಿ ನಿಂತು ಹಿನ್ನಲೆಯಲ್ಲಿ ನೋಡಿದಾಗ, ಹಳ್ಳಿಯಲ್ಲಿ ಈ ಬಗೆಯ ಅನುಭವಗಳೊಂದಿಗೆ "ಕೆಸರಿನಲ್ಲಿ ಹುಟ್ಟಿದ ಕಮಲ"ವಾಗಿರುವ ಉಮಾಪತಿ ಶಿವಮೊಗ್ಗಕ್ಕೆ ಓದಲು ಬಂದರೆ, ಅಲ್ಲಿಯೂ ತನ್ನ ಸಹಪಾಠಿಗಳು "ನಿಮ್ಮವ್ವನ ಹತ್ರ ನಾಲ್ಕು ಕಟ್ಟು ಹರಿವೇ ಸೊಪ್ಪುತಗಂಡಿವಿ ಕಣಯ್ಯ ಎನ್ನುತ್ತಿದ್ದರು. ಅದು ಅವರ ಮೆಚ್ಚುಗೆಯೋ, ಹೀಯಾಳಿಕೆಯೋ? ಅಥವಾ ತನ್ನ ವರ್ಗ, ತನ್ನ ಹಿನ್ನೆಲೆಯನ್ನು ನೆನಪು ಮಾಡಿಕೊಡುವ, ನೆನಪಿಟ್ಟುಕೊಳ್ಳುವ

---

[೯] ಪಿ. ಲಂಕೇಶ್‌ರವರ ಆಯ್ದ ಕಥೆಗಳು, ಲಂಕೇಶ್, ಪಿ., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬, ಪು.೪೧–೫೬.

[೧೦] ಅದೇ.

ಪರಿಯೋ? ಅಥವಾ ನಾನು ಕ್ಲಾಸಿನಲ್ಲಿ ಜಾಣನಾಗಿದ್ದರಿಂದ ಹುಡುಗಿಯರು ಕೂಡ ಒಂದು ರೀತಿಯ ನೋಟ ನನ್ನತ್ತ ಬೀರುತ್ತಿದ್ದುದ್ದರಿಂದ ನನ್ನನ್ನು ನೋಯಿಸುವ ರೀತಿಯೋ"[೧೧] ಎಂದು ಗೊತ್ತಾಗದೆ ಒಳಗೆ ಕುದಿಯುತ್ತಿದ್ದ.

ಈ ಹಿನ್ನೆಲೆಯಲ್ಲಿಯೇ ಉಮಾಪತಿ ತನ್ನ ಪ್ರತಿಭೆಗೆ ದೊರಕಲಿರುವ ಸ್ಕಾಲರ್‌ಶಿಪ್ ತರಲು ಶಿವಮೊಗ್ಗೆಗೆ ಹೊರಡುತ್ತಾನೆ. ಆದರೆ ನಿಂಗೇಗೌಡನ ಜೊತೆಯಲ್ಲಿ ತನ್ನ ತಾಯಿ, ಅಕ್ಕ ಬರುತ್ತಿರುವುದು ಇಷ್ಟವಿರಲಿಲ್ಲ. ವಿಧಿಯಿಲ್ಲದೇ ಹೋಗುತ್ತಾನೆ. ಸ್ಕಾಲರ್‌ಶಿಪ್ ಕಮಿಟಿ ಮೆಂಬರ್ ಶೇಖರಪ್ಪ ಆಧುನಿಕತೆಯಿಂದ ಬೀಗುವ ವ್ಯಕ್ತಿ ಎನ್ನುವುದು ಅವನ ಅಹಂಕಾರದ ಮಾತುಗಳು. ಅವನು ಇರುವ ಮನೆ ಪ್ರತಿನಿದಿಸುತ್ತಿವೆ. ಶೇಖರಪ್ಪನವರ ಮನೆಯ ತೋಟಿಯ ಬಳಿ ತನ್ನ ತಾಯಿ ಮತ್ತು ಅಕ್ಕ ವ್ಯಾಪಾರ ಮಾಡುತ್ತಿದ್ದಾಗ ಉಮಾಪತಿಯ ಸಂಶಯದ ನೋಟ ಬೀರಿ "ನಾಲ್ಕಾಣಿ ವ್ಯಾಪಾರ ಮಾಡುವುದಕ್ಕೆ ಎಷ್ಟು ಕಾಲ ತಗೋತೀಯಾಯ್ಯ"[೧೨] ಎಂಬುದು ಆಧುನಿಕತೆಯತ್ತಾ ಹೊರಳುತ್ತಿರುವ ಉಮಾಪತಿಯು ಮುಜುಗರವನ್ನು ಸ್ಪಷ್ಟಪಡಿಸುತ್ತದೆ.

ಉಮಾಪತಿ ಮತ್ತು ಶೇಖರಪ್ಪನ ನಡುವಿನ ಮಾತುಗಳು ಮತ್ತು ಶೇಖರಪ್ಪನ ಮಗಳು ಸಂಧ್ಯಾಳ ಮಾತಿನ ಉಪಟಳ ಒಂದು ವಿಸ್ಮಯ ಜಗತ್ತನ್ನು ಈ ಕಥೆಯಲ್ಲಿ ಸೃಷ್ಟಿಸುತ್ತದೆ. ಉಮಾಪತಿ ತನ್ನ ಪ್ರತಿಭೆ, ಪಾಂಡಿತ್ಯವನ್ನು ಬಳಸಿದರೆ ಶೇಖರಪ್ಪ ಹಣ, ಅಧಿಕಾರಗಳನ್ನು ಬಳಸುತ್ತಾನೆ. ಇಲ್ಲಿ ಪರಸ್ಪರ ಪ್ರಭಾವಗಳ ಫಲಕಾರಿಯಾಗುವುದು ಅಷ್ಟರಲ್ಲೇ ಇದೆಯಾದರೂ ಅಂತಿಮವಾಗಿ ಉಮಾಪತಿ ಅವಮಾನಿತನಾಗುವುದು ಇಲ್ಲಿನ ಸತ್ಯ.

ಉಮಾಪತಿ ಶೇಖರಪ್ಪನ ಬಳಿ ಮಾತನಾಡುವಾಗ ಆತ ಕೇಳುವ "You know English well?" ಅಂದಾಗ "Yes Sir". You are a genious ಎಂದಾಗ "Of course" ಎನ್ನುವ ಮಾತುಗಳು ಉಮಾಪತಿಯ ಪ್ರತಿಭೆಯನ್ನು ತೋರಿಸುತ್ತವೆಯಾದರೂ, ತನ್ನ ಪ್ರತಿಭೆಗೆ ತಕ್ಕ ಪುರಸ್ಕಾರ ಸಿಗುತ್ತದೆ ಎಂದು ಆತ್ಮವಿಶ್ವಾಸ ಹೊಂದುವ ವೇಳೆಗೆ ತನ್ನ ಅವ್ವ ಕಳ್ಳತನದ ಅರೋಪಕ್ಕೆ ಒಳಗಾಗುವಳು. ಆಗ ತನ್ನೆಲ್ಲಾ ಪ್ರತಿಭೆಯು ಅದರ ಮುಂದೆ

---

[೧೧] ಅದೇ.

[೧೨] ಪಿ. ಲಂಕೇಶ್‌ರವರ ಆಯ್ದ ಕಥೆಗಳು, ಲಂಕೇಶ್, ಪಿ., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬, ಪು.೪೧–೫೬.

ಮಣ್ಣು ಪಾಲಾಯಿತಲ್ಲ ಎಂದು ತನ್ನ ಅವ್ವನನ್ನು ಅನಾಗರೀಕ ಎನ್ನುವ ಅಬ್ಬರದಲ್ಲಿ ಅವಮಾನಿತನಾಗಿ ತಲೆ ತಗ್ಗಿಸುತ್ತಾನೆ. ಇಲ್ಲಿ ತನ್ನ ದೊಡ್ಡಸ್ಥಿಕೆಗೆ ಕುಂದು ಉಂಟಾಯಿತು ಎಂದು ಹಲಬುತ್ತಾನೆ. ಇದೆಲ್ಲಾ ಹಳ್ಳಿಯ ಸಾಂಪ್ರದಾಯಿಕ ನಡವಳಿಕೆಗಳೇ ಕಾರಣ ಎಂದು ಕೆಂಡಮಂಡಲವಾಗುತ್ತಾನೆ.

ತನ್ನ ತಾಯಿ ಮತ್ತು ಅಕ್ಕನನ್ನು ಹೀನಾಯವಾಗಿ ಇಡೀ ಸಮಾಜದ ಮುಂದೆ ಕಾಣುವ ಹಾಗೆ ಮಾಡಿದ್ದು ಅವನ ಆಧುನಿಕ ಮನಸ್ಸು. ತಾನು ಹೊರಟ ಸ್ಕಾಲರ್‌ಶಿಪ್ ಯಾತ್ರೆ ಕೇವಲ ತನ್ನ ಪ್ರತಿಭೆಯಿಂದ ದೊರಕಲಾರದು. ಕೆಲವರ ಪ್ರಭಾವದಿಂದ ಮಾತ್ರ ಸಾಧ್ಯ ಎಂಬುದನ್ನು ತಿಳಿದ ಉಮಾಪತಿಯಲ್ಲಿ ಸ್ಕಾಲರಶಿಪ್ ಯಾತ್ರೆಯ ಸಮಯದಲ್ಲಿ ಎದುರಾದ ಘಟನೆಗಳಿಂದ ಕ್ರಮೇಣ ಮುಗ್ಧತೆ ಮಾಯವಾಗಿ ಆಧುನಿಕತೆ ವ್ಯಾಪಿಸುತ್ತದೆ. ಉಮಾಪತಿಗೆ ತನ್ನ ಬದುಕಿನಲ್ಲಿ ಉಸಿರುಕಟ್ಟಿಸುವ ಘಟನೆಗಳೇ ಹೆಚ್ಚು ಈ ಎಲ್ಲವುಗಳಿಂದ ಪಾರಾಗಿ ದೂರ ಹೋಗುವ ಪಲಾಯನ ಬುದ್ಧಿ ತಲೆದೋರುತ್ತದೆ. ಅದಕ್ಕೆ ಕಾರಣ ಬಹುಶಃ ಅವನು ಅತ್ಯಂತ ಸೆನ್ಸಿಟಿವ್ ಆಗಿದ್ದದ್ದು ಎನ್ನಬಹುದು.

### ೩.೧.೨ ದೇವಿಯ ಚಾಣಾಕ್ಷತನ :

'ದೇವಿ' ಕಥೆಯ ದೇವಿ ಐದನೇ ಕ್ಲಾಸ್ ಮಾತ್ರ ಓದಿರುವ ತೀರಾ ಸಾಮಾನ್ಯ ಹೆಂಗಸಾದ ಈಕೆ ಚುರುಕಾಗಿ ಓಡಾಡುವ ಆಕರ್ಷಕ ವ್ಯಕ್ತಿತ್ವವುಳ್ಳವಳು. ಇವಳು ಸಂಸಾರಯಾತ್ರೆಯಲ್ಲಿ ಚಾಣಾಕ್ಷತನದಿಂದ ನಡೆಸಿಕೊಂಡು ಹೋಗುವವಳು ಎಂಬುದು ಕಥೆಯ ಪ್ರಾರಂಭದಲ್ಲಿ ನಮಗೆ ತಿಳಿಯುತ್ತದೆ. ಲಂಕೇಶರ 'ಮುಸ್ಸಂಜೆಯ ಕಥಾಪ್ರಸಂಗ'ದ ರಂಗವ್ವನಂತೆಯೇ ಮತ್ತು 'ಉರಿದ ಊರಿನವರು' ಕಥೆಯ ಚೆಲುವಮ್ಮನಂಥ ಬದುಕಿಗಾಗಿ ಹೋರಾಡುವ ಬಂಡಾಯದ ಹೆಣ್ಣು ಇಲ್ಲಿಯೂ ಇದ್ದಾಳೆ. ಅವಳೇ ದೇವಿ ಕಥೆಯ ದೇವಿ ಎಂದು ಹೇಳಬಹುದು.

ಹಳ್ಳಿಯ ಹೆಣ್ಣಾದರೂ ತನ್ನ ಆಳದ ವೇದನೆಗಳನ್ನೆಲ್ಲಾ ಅದುಮಿಟ್ಟು ತನ್ನ ಆಫೀಸರ್ ಗಂಡನಾದ ಚಂದ್ರಪ್ಪನೊಂದಿಗೆ ಚೊಕ್ಕವಾಗಿ ಸಂಸಾರ ಮಾಡುವಳು. ತನ್ನ ಮಗಳಿಗೆ ಮದುವೆ ಮಾಡಿ ಪ್ರಸ್ತದ ದಿನ ಸಂಭ್ರಮವಾಗಿ ಓಡಾಡುತ್ತಾಳೆ. ತನ್ನ ಹಿಂದಿನ ಜೀವನವನ್ನು ಮರು ನೆನಪಿಸಿಕೊಳ್ಳಲು ಯತ್ನಿಸುತ್ತಾಳೆ.

ಈಕೆ ಹಳ್ಳಿಯ ಮುಗ್ಧ ಹೆಣ್ಣು, ಐದನೇ ಕ್ಲಾಸ್ ಮಾತ್ರ ಓದಿದ ಅಷ್ಟೇನು ತಿಳುವಳಿಕೆ ಇಲ್ಲದವಳು. ಹಳ್ಳಿಯಲ್ಲಿ ಪ್ರಕೃತಿಯ ತಾಣದಲ್ಲಿ ಬೆಳೆದ ಈಕೆಯ ಸೌಂದರ್ಯವೂ ಅಪೂರ್ವವಾಗಿತ್ತು. ದೇವಿಯನ್ನು ಒಳ್ಳೆಯ ಅಂತಸ್ತು, ಅಧಿಕಾರ ಇರುವ ಚಂದ್ರಪ್ಪ ಕೈಹಿಡಿಯುತ್ತಾನೆ. ಚಂದ್ರಪ್ಪನನ್ನು ಮದುವೆಯಾದ ಮೇಲೆ ದೇವಿಯಲ್ಲಿ ತಿಳುವಳಿಕೆ, ನಿಗೂಢತೆ, ಚಾಣಾಕ್ಷತನ ಬೆಳೆಯುತ್ತದೆ. ಕ್ರಮೇಣ ದೇವಿಯನ್ನು ನಿರ್ಲಕ್ಷಿಸುವ ಚಂದ್ರಪ್ಪ ಮತ್ತು ದೇವಿಯ ಆಕರ್ಷಣೆಯಲ್ಲಿ ಬಿದ್ದು ಪ್ರೇಮಕ್ಕಾಗಿ ಪರಿತಪಿಸುವ ಸಿನಿಮಾ ನಿರ್ದೇಶಕ ರವಿನಾಯ್ಡು ಎಲ್ಲರೂ ಹಳ್ಳಿಯ ಹೆಣ್ಣಾದ ದೇವಿಯ ಎದುರು ತೀರಾ ಸಣ್ಣಮನುಷ್ಯರಾಗಿ ಗೋಚರಿಸುತ್ತಾರೆ. ಅನುಭವಗಳಿಂದ ಪಕ್ವವಾಗಿ ಆಧುನಿಕವಾಗಿ ಯೋಚಿಸುವ ದೇವಿ ಎಲ್ಲವನ್ನು ನಗೆಯಲ್ಲಿ ತೇಲಿಸುತ್ತಾಳೆ.

ಹೌದು ದೇವಿಯ ಸೌಂದರ್ಯಕ್ಕೆ ನಿರ್ದೇಶಕ ರವಿನಾಯ್ಡು ಸೋತಿರುತ್ತಾನೆ. ದಿನದಿಂದ ದಿನಕ್ಕೆ ಬಹಳ ಆಕರ್ಷಕಳಾಗಿ ಕಾಣುವ ದೇವಿಯ ವ್ಯಕ್ತಿತ್ವ ಮತ್ತು ಅವಳ ಆಧುನಿಕ ಆಲೋಚನಾ ಲಹರಿಗಳು ಇವನನ್ನು ಮಂತ್ರಮುಗ್ಧನನ್ನಾಗಿಸುತ್ತದೆ. ಇವಳ ಪ್ರೇಮಪಾಶದಲ್ಲಿ ಸಿಲುಕುತ್ತಾನೆ. ಇವಳು ಗೊಂದಲದಲ್ಲಿ ಸಿಲುಕುತ್ತಾಳೆ.

ರವಿನಾಯ್ಡು ನನ್ನ ಜೊತೆಯಲ್ಲಿ ಶೂಟಿಂಗ್‌ಗೆ ಬಾ ಎಂದಾಗ "ಚಂದ್ರಪ್ಪನ ಗೈರು ಹಾಜರಿಯಲ್ಲಿ ದೇವಿ ತಾನೇ ನಾಯ್ಡುವಿಗೆ ನೆರವಾಗುವುದಾಗಿ ಹೇಳಿದ್ದಳು. ರವಿನಾಯ್ಡು ಚಿತ್ರೀಕರಣ ಮಾಡಲು ಬಿಳಿಗಿರಿರಂಗನಬೆಟ್ಟ, ಬಂಡೀಪುರದ ಕಾಡುಗಳಲ್ಲಿ ದೇವಿಯ ಜೊತೆ ಸಂಚರಿಸಿದ ತಾರುಣ್ಯವನ್ನು ಹಿಂದೆ ಬಿಟ್ಟು ಪಕ್ವತೆ ತಲುಪಿದ್ದ ದೇವಿ–ಆಕೆಯ ಕಣ್ಣುಗಳಲ್ಲಿ ನಾಯ್ಡು ಕರಗಿಹೋದ. ಎಳ್ಳು ಉರಿದಂತೆ ಮಾತನಾಡುವ, ಮಿಂಚಿನಂತೆ ಓಡಾಡುವ ದೇವಿಯ ಬಗ್ಗೆ ನಾಯ್ಡುವಿಗೆ ಅಚ್ಚರಿ, ದಿಗ್ಭ್ರಮೆ ಹೆಚ್ಚಾಗುತ್ತದೆ."[೧೩]

ದೇವಿ ಮತ್ತು ನಾಯ್ಡು ಕೋಳಿ–ಹುಂಜದ ಕಾಮಕೇಳಿಯಂತೆ ಪ್ರೀತಿಯ ಅಮಲಿನಲ್ಲಿ ತೇಲಾಡಿದರು. "ನಾನು ನಿಮ್ಮೊಂದಿಗೆ ಇದ್ದು ಬಿಡಬೇಕು ಅನ್ಸುತ್ತೆ" ಎಂದು ನಾಯ್ಡು ಅಂದಾಗ "ಇರಿ"[೧೪] ಎನ್ನುವ ದೇವಿಯ ಮಾತುಗಳು ಒಂದು ರೀತಿಯಲ್ಲಿ ದೇವಿಯನ್ನು ಸಂಪೂರ್ಣ ವ್ಯಕ್ತಿಯನ್ನಾಗಿ ಪರಿವರ್ತಿಸುತ್ತವೆ. ಅಸ್ತಿತ್ವವಾದದ ಹಿನ್ನೆಲೆಯಲ್ಲಿ ದೇವಿಯ ಕ್ರಿಯೆಗೆ ಮತ್ತು

---

[೧೩] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೧೧೬–೧೨೨.

[೧೪] ಅದೇ.

ಪ್ರತಿಕ್ರಿಯೆಗಳಿಗೆ ಅವಳೇ ಸಂಪೂರ್ಣವಾಗಿ ಬದ್ಧಳಾಗಿ ಕಂಡುಬರುತ್ತಾಳೆ. ದೇವಿ ನಾಯ್ಡುವಿಗೆ ಆಕರ್ಷಿತಳಾಗಿದ್ದಳೋ? ಅಥವಾ ದೇವಿಯ ಬಗೆಗಿನ ಚಂದ್ರಪ್ಪನ ಕಾಳಜಿ ಕಡಿಮೆಯಾದದ್ದು ದೇವಿಯ ಪ್ರತಿಕ್ರಿಯೆಗೆ ಕಾರಣವಾಯಿತೇ? ಎಂಬಂಥ ಪ್ರಶ್ನೆಗಳು ಈ ಕಥೆಯಲ್ಲಿ ಅಸಮಂಜಸವಾಗಿ ಕಾಣುತ್ತವೆ.

ಕಥೆಯಲ್ಲಿ ಬರುವ ಪಾತ್ರಗಳು ಒಂದು ಆಯಾಮದಿಂದ ಮೂಡಿಬಂದರೆ 'ದೇವಿ' ಸಂಪೂರ್ಣವಾಗಿ ಇದಕ್ಕೆ ಭಿನ್ನವಾದ ಆಯಾಮದಿಂದ ಮೂಡಿಬರುವ ಪಾತ್ರವಾಗಿದೆ.

ದೇವಿ ತನ್ನ ಪ್ರಸ್ತದ ಬಗ್ಗೆ ಆಲೋಚಿಸಲು ಆರಂಭಿಸುವುದರ ಮೂಲಕ ತನ್ನ ವೈವಾಹಿಕ ಬದುಕು, ಲೈಂಗಿಕ ಬದುಕು, ತನ್ನ ಬದುಕಿನಲ್ಲಿ ಹಾದು ಹೋದ ಪ್ರೀತಿ ಪ್ರೇಮಗಳು – ಹೀಗೆ ಒಟ್ಟಾರೆ ತನ್ನ ಬಗ್ಗೆಯೇ ಪುನರ್ ಮನನ ನಡೆಸುತ್ತಾಳೆ. ಇವೆಲ್ಲವೂ ನಡೆದಾಗ ಕಥೆಯಲ್ಲಿ ಚಂದ್ರಪ್ಪ ನಿರ್ಲಿಪ್ತನಾಗಿ ದೇವಿಯ ಪಕ್ಕ ಮಲಗಿ ನಿದ್ರಿಸಿರುವುದು ಚಿತ್ರಿತವಾಗಿದೆ. ವೈವಾಹಿತ ಬದುಕಿನ ಆಕರ್ಷಣೆಗಳು ಹಾಗೂ ಲೈಂಗಿಕ ಜೀವನದಿಂದ ವಂಚಿತಳಾದ ದೇವಿಯ ಸಹಜ ಪ್ರತಿಕ್ರಿಯೆ ರೀತಿಯಲ್ಲಿ ಈ ಕಥೆ ಮೂಡಿಬರುತ್ತದೆ.

ಸ್ತ್ರೀಪ್ರಜ್ಞೆಯ ಹೊಸ ದೃಷ್ಟಿಕೋನವನ್ನು ಹುಟ್ಟಿಹಾಕುವ ಹಿನ್ನೆಲೆಯಲ್ಲಿ ಈ ಕಥೆ ಮುಖ್ಯವಾಗಿದೆ. ಒಟ್ಟಾರೆ ಪ್ರೇಮ ಮತ್ತು ಕಾಮ ಹೆಣ್ಣಲ್ಲೂ ಮುಖ್ಯವಾಗುವ ಪರಿ ಈ ಕಥೆಯಲ್ಲಿ ವ್ಯಕ್ತವಾಗಿದೆ. 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ'ಯ ಹೆಣ್ಣು ಪಾತ್ರಗಳು ಒಂದು ಆಯಾಮದಿಂದ ಮೂಡಿಬಂದರೆ, 'ದೇವಿ' ಸಂಪೂರ್ಣವಾಗಿ ಇದಕ್ಕೆ ಭಿನ್ನವಾದ ಆಯಾಮದಿಂದ ಮೂಡಿಬರುವ ಪಾತ್ರವಾಗಿದೆ.

### ೩.೧.೩ ನಾಗಾನ ಉಲ್ಲಂಘನೆ :

ಸಾಮಾಜಿಕ ಕ್ರಾಂತಿಯನ್ನು ಮಾನವೀಯ ಆಯಾಮದ ಚೌಕಟ್ಟಿನಲ್ಲಿ ಅಭಿವ್ಯಕ್ತಿಸುವ ಕಥೆ 'ಉಲ್ಲಂಘನೆ' ಪ್ರಾಮಾಣಿಕತೆ ಮತ್ತು ಸಂಯಮಗಳು ಮಾನವೀಯ ಆಯಾಮಕ್ಕೆ ಚೌಕಟ್ಟನ್ನು ಒದಗಿಸಿಕೊಟ್ಟಿದೆ. ಈ ಕಥೆಯಲ್ಲಿ ಮೂರು ಬಗೆಯ ವ್ಯಕ್ತಿಗಳು ಕಂಡುಬರುತ್ತಾರೆ. ಫ್ಯೂಡಲ್ ವ್ಯವಸ್ಥೆಯನ್ನು ಪ್ರತಿನಿಧಿಸುವ ಕೃಷ್ಣಸ್ವಾಮಿ, ರೈತಾಪಿ ವರ್ಗದವನು ಪ್ರತಿನಿಧಿಸುವ ಕೆಂಚ, ನಾಗನ ತಂದೆ ಭರಮ ಮತ್ತು ಆಧುನಿಕತೆಯಿಂದ ಜೀವನದಲ್ಲಿ ಬಿಡುಗಡೆ ಮಾರ್ಗವನ್ನು ತೋರಿಸಿಕೊಡುವ ಜಯಂತ, ಸೀತೆ, ನಾಗ–ಪಾತ್ರಗಳು ಕಥೆಗೆ ಗಟ್ಟಿತನವನ್ನು

ಒದಗಿಸಿವೆ. ಜಮೀನ್ದಾರಿ ಪದ್ಧತಿಯ ನಿರ್ಮೂಲನೆ ಕಥೆಯಲ್ಲಿ ಯಾವುದೇ ಘರ್ಷಣೆಗಳು, ಕ್ರಾಂತಿಗಳಿಲ್ಲದೆ ನಡೆಯುತ್ತದೆ. ಜಮೀನ್ದಾರಿ ಪದ್ಧತಿಯನ್ನು ಹೊಸ ನೆಲೆಯಲ್ಲಿ ಅರ್ಥೈಸುವ ಕ್ರಮ ಈ ಕಥೆಯಲ್ಲಿದೆ.

ಇತ್ತೀಚಿನ ದಿನಗಳಲ್ಲಿ ತೀರ ಪರಿಚಿತವಾಗಿರುವ ಜಮೀನ್ದಾರಿ ಪದ್ಧತಿ, ಸಾಮಾಜಿಕ ಸಮಸ್ಯೆಯೂ ಆಗಿದೆ. ಇಂತಹ ಸಮಕಾಲೀನ ಸಮಸ್ಯೆಗೆ ಸ್ಪಂದಿಸುವ ಅಂಶದಿಂದಲೂ ಕಥೆ ಮುಖ್ಯವಾಗುತ್ತದೆ. ಜಾತಿ, ವರ್ಗ, ಸಂಘರ್ಷಗಳು ಹಾಗೂ ಮನುಷ್ಯ ಸಂಬಂಧಗಳ ಸಂಕೀರ್ಣತೆಗಳ 'ಮುಕ್ತ' ಚರ್ಚೆ ಕಥೆಯಲ್ಲಿದೆ. ಕೃಷ್ಣಸ್ವಾಮಿ-ಭರಮ, ಕೃಷ್ಣಸ್ವಾಮಿ-ನಾಗ, ನಾಗ-ಕೆಂಚ ವೆಂಕಟೇಶ, ನಾಗ-ಸೀತಾ, ಕೃಷ್ಣಸ್ವಾಮಿ-ಜಯಂತ ಇವರ ಮಾನವೀಯ ಸಂಬಂಧಗಳನ್ನು ಸಾಮಾಜಿಕ ಸಾಂಸ್ಕೃತಿಕ ನೆಲೆಯಲ್ಲಿಟ್ಟು ಅದರ ಸಂಕೀರ್ಣತೆಯನ್ನು ಅರಿಯುವ ಪ್ರಯತ್ನ ಕಥೆಯಲ್ಲಿ ವಿಭಿನ್ನ ರೀತಿಯಲ್ಲಿ ವ್ಯಕ್ತಗೊಂಡಿದೆ.

ಕೃಷ್ಣಸ್ವಾಮಿ ಮತ್ತು ಭರಮ ಇವರಿಬ್ಬರೂ ಕ್ರಮವಾಗಿ ಜಮೀನ್ದಾರಿ ಮತ್ತು ರೈತಾಪಿ ವರ್ಗವನ್ನು ಪ್ರತಿನಿಧಿಸುತ್ತಾರೆ. ಆದರೆ ಇವರಿಬ್ಬರಲ್ಲಿ ಮನುಷ್ಯತ್ವದ ಗುಣಗಳಿವೆ. ಕೃಷ್ಣಸ್ವಾಮಿ ಭರಮನನ್ನು ತನ್ನ ಮನೆಯ ಆಳು ಎಂಬಂತೆ ನೋಡದೇ ತಮ್ಮ ಮನೆಯಲ್ಲೊಬ್ಬನು ಎಂದು ಕಾಣುತ್ತಾನೆ. ಇವರಿಬ್ಬರಲ್ಲೂ ಒಡೆಯ, ಆಳು ಎಂಬ ಭಾವನೆ ಇರುವುದಿಲ್ಲ. ಇವರಿಬ್ಬರಲ್ಲಿರುವ ಪ್ರಾಮಾಣಿಕತೆ, ನಂಬಿಕೆ, ವಿಶ್ವಾಸಗಳು ಮನುಷ್ಯ ಸಂಬಂಧಗಳನ್ನು ಗಟ್ಟಿಗೊಳಿಸಿವೆ. ಮಹಾಭಾರತದ ದುರ್ಯೋಧನ, ಕರ್ಣರಂತೆ ಕಂಡುಬರುತ್ತಾರೆ. ಕೃಷ್ಣಸ್ವಾಮಿಯವರ ಕಷ್ಟಕ್ಕೆ ಭರಮನ ಸ್ಪಂದನೆ ಇದೆ ಹಾಗೆ ಭರಮನ ಏಳಿಗೆಯಲ್ಲಿ ಕೃಷ್ಣಸ್ವಾಮಿಯವರ ಒಲವು ಇದೆ ಎಂಬುದು ಕಥೆಯಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

"ಕೃಷ್ಣಸ್ವಾಮಿ ಅಂಗಳದಲ್ಲಿ ನಿಂತಿದ್ದರು. ನಾಗನನ್ನು ನೋಡುತ್ತಾ ಇದ್ದು ಹೇಳಿದರು. ಚೆನ್ನಾಗಿ ಓದಬೇಕು ರಾಜ.

ನಾಗ ತಲೆಯಲ್ಲಾಡಿಸಿದ. ಅದು ಶಬ್ದವೆಂದು ಆತ ತನ್ನ ಸಂಕೋಚದಲ್ಲಿ ತಿಳಿದಿದ್ದ. ತಲೆಯಾಡಿಸಿದು ಗಮನಿಸಿದೆ ಇದ್ದ ಕೃಷ್ಣಸ್ವಾಮಿ ಹೇಳಿದರು, 'ನಮ್ಮ ದೊಡ್ಡ (ಭರಮ)ನ ಮಗ ನಿಜವಾಗ್ಲೂ ದೊಡ್ಡವನಾಗಬೇಕು'.

ನಾಗ ಮತ್ತೆ ತಲೆಯಲ್ಲಾಡಿಸಿದ. ಯಜಮಾನರ ಬಗ್ಗೆ ಎಷ್ಟೇ ಪ್ರೀತಿ, ಗೌರವವಿದ್ದರೂ ಅವನಿಗೆ ಅಲ್ಲಿಂದ ಹೋದರೆ ಸಾಕೆನಿಸಿತು. ಅದನ್ನು ಅರಿತ ಕೃಷ್ಣಸ್ವಾಮಿ, 'ಗಿರಿಜ ಹತ್ರ ಮಾತಾಡು ದುಡ್ಡುಕಾಸು ಬೇಕಾದರೆ' ಅಂದು ಒಳಗೆ ಹೋದರು."[೧೫]

ಭರಮನ ಮಗನಾದ, ನಾಗಾನ ವಿದ್ಯಾಭ್ಯಾಸದ ಕಡೆ ಮುತುವರ್ಜಿ ವಹಿಸುವ ಕೃಷ್ಣಸ್ವಾಮಿ ಭರಮನಿಗೆ ದೇವರಾಗಿ ಕಾಣಿಸುತ್ತಾನೆ. ಕೃಷ್ಣಸ್ವಾಮಿ ಭರಮನ ಕುಟುಂಬದ ಬಗ್ಗೆ ಕಾಳಜಿ ಇರುವುದು ಇದರಿಂದ ಗೊತ್ತಾಗುತ್ತದೆ. ಕೃಷ್ಣಸ್ವಾಮಿಯವರು ಹುಳಿಮಾವಿನ ಜಮೀನು ಕೊಡುತ್ತೇನೆ ಎಂದರೂ ಒಡೆಯನಿಗೆ ನಿಷ್ಟನಾದ ಭರಮನಿಗೆ ಜಮೀನಿನ ಮೇಲೆ ವಿಶೇಷವಾದ ಅತುರವಾಗಲಿ, ಮಮತೆಯಾಗಲಿ ಇರುವುದಿಲ್ಲ. ಫ್ಯೂಡಲ್ ವ್ಯವಸ್ಥೆಯ ವಿರುದ್ಧ ಕ್ರಾಂತಿಕಾರಕ ಹೋರಾಟಗಳನ್ನು ಮಾಡುತ್ತಿರುವ ತನ್ನ ವರ್ಗದವರಾದ ಕೆಂಚ, ವೆಂಕಟೇಶ್‌ರವರ ಕಡೆ ಆಸೆ ವಹಿಸುವುದಿಲ್ಲ. ಹಳ್ಳಿಯ ಮುಗ್ಧತನದ ಪ್ರತೀಕವಾಗಿ ಕಂಡುಬರುವ ಭರಮ ಕೃಷ್ಣಸ್ವಾಮಿಯವರಿಗೆ ನಿಷ್ಟನಾಗಿದ್ದುಕೊಂಡು, ಅವನ ಪ್ರೀತಿಯನ್ನು ಗಳಿಸುತ್ತಾನೆ. ಇವರಿಬ್ಬರ ಪಾತ್ರಗಳು ಫ್ಯೂಡಲ್ ಮತ್ತು ರೈತಾಪಿ ವರ್ಗಕ್ಕೆ ಹೊಸ ಮಾದರಿಯನ್ನು ಕಲ್ಪಿಸಿಕೊಡುವಲ್ಲಿ ಮುಖ್ಯವಾಗಿ ಕಂಡುಬರುತ್ತವೆ.

ಕೃಷ್ಣಸ್ವಾಮಿ ಮತ್ತು ನಾಗ ಇವರಿಬ್ಬರ ನಡುವೆ ಆತ್ಮೀಯ ಬಾಂಧವ್ಯವಿರುವುದು ಕಥೆಯಲ್ಲಿ ಗೋಚರಿಸುತ್ತದೆ. ಆನಂದಪುರದಿಂದ ಸಾಗರಕ್ಕೆ ಅಲ್ಲಿಂದ ಬೆಂಗಳೂರಿಗೆ ಹೋಗಿ ವಿದ್ಯಾಭ್ಯಾಸ ಕಲಿತು ಬಂದ ಯುವಕ ನಾಗ. ನಾಗ ತನ್ನ ಆಳು ಭರಮನ ಮಗನಾದರೂ ಕೃಷ್ಣಸ್ವಾಮಿಯವರಿಗೆ ಬಹಳ ಅಕ್ಕರೆ. ಮಹಾಭಕ್ತರಾದ ಕೃಷ್ಣಸ್ವಾಮಿಯವರ ನಿತ್ಯದ ಜಪ, ಕರ್ಮಗಳು, ಜನರೊಡನೆ ನಡೆದುಕೊಳ್ಳುವಲ್ಲಿಯ ಸೌಜನ್ಯ, ತಮ್ಮದಾದ ಸಾವಿರಾರು ಎಕರೆ ಜಮೀನನ್ನು ರೈತರಿಗೆ ಹಂಚಿದರೂ ನಿರ್ಮಲವಾಗಿರುವ ಸ್ವಭಾವವನ್ನು ನಾಗ ಬಹಳ ಮೆಚ್ಚಿದ್ದನು. ವಿದ್ಯೆಯನ್ನು ಕಲಿತು ಹೊಸ ಸಂವೇದನೆಯನ್ನು ಕಲಿತ ನಾಗನನ್ನು ಕಾಡುತ್ತಾ ಇದ್ದ ಅಂಶಗಳೆಂದರೆ,

ಕೃಷ್ಣಸ್ವಾಮಿಗಳ ಮುಖ, ಭರಮನ ದುಗುಡ ತುಂಬಿದ ಮೌನ, ಅವ್ವನ ದಿಗ್ಭ್ರಮೆ: ತನ್ನ ಸುತ್ತಣ ಘೋಷಣೆಗಳು ಶಿಕ್ಷಣ ಎಲ್ಲರಿಗೂ ವಿಶ್ವಾಸ ನೆಮ್ಮದಿ ತಂದಿದೆ. ಆದರೆ ಶಿಕ್ಷಣ ಅದು ನಾಗಾನ ತಳಮಳವನ್ನು ಹೆಚ್ಚಿಸುತ್ತದೆ.

---

[೧೫] ಪಿ. ಲಂಕೇಶ್ ಅವರ ಆಯ್ದ ಕಥೆಗಳು, ಪಿ. ಲಂಕೇಶ್, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬, ಪು.೯೨.

"ತಮ್ಮ ಜನಕ್ಕೆ ಆಗುತ್ತಿದ್ದ ಅವಮಾನದ ವಿವರದಲ್ಲಿ ಕೆಂಚ ವೆಂಕಟೇಶ್ವರ ರೋಷ ನಿಜ ಅನಿಸುತ್ತಿತ್ತು. . . " ಆದರೆ ಎಲ್ಲಾ ಅವಮಾನಗಳೂ ನಾಗನನ್ನು ದುರ್ಬಲನನ್ನಾಗಿ ಮಾಡುತ್ತಿದ್ದವು. ಇನ್ನೊಂದು ರೀತಿಯಲ್ಲಿ ಏನನ್ನೂ ನಂಬಿದವನಂತೆ ಯಾವುದೋ ಬಿದ್ದು ಹೋಗುವುದನ್ನು ನೋಡಿದಂತೆ ನಾಗ ಭಯಗೊಳ್ಳುತ್ತಿದ್ದ"[೧೬] ಸೀತಾಳ ಪ್ರೀತಿ ಅವನಿಗೆ ಸತ್ಯವನ್ನು ಎದುರಿಸುವ ಧೈರ್ಯ ಕೊಡುತ್ತದೆ ಹಾಗೂ ಅವನ ಭಯವನ್ನು ನಿವಾರಿಸುತ್ತದೆ.

ಕೃಷ್ಣಸ್ವಾಮಿಯವರೊಂದಿಗಿನ ಕಡೆಯ ಭೇಟಿಯಲ್ಲಿ ನಾಗಾನ ಉಲ್ಲಂಘನೆಯ ಸೂಚನೆಯಿದೆ. ಸಾವಿರಾರು ಎಕರೆ ಜಮೀನನ್ನು ಕಳೆದುಕೊಂಡು ಕೃಷ್ಣಸ್ವಾಮಿ ತನ್ನ ಮಗನ ಪ್ರೀತಿಯಿಂದಲೂ ವಂಚಿತನಾಗಿದ್ದಾನೆ. ಆದರೂ ಅವನ ಮುಖದಲ್ಲಿ ಶಾಂತಿ, ನೆಮ್ಮದಿ ಇದೆ. ಫ್ಯೂಡಲ್ ವ್ಯವಸ್ಥೆಯ ಹೊಸ ಮಾದರಿಯಾಗಿ ಗೋಚರಿಸುವ ಕೃಷ್ಣಸ್ವಾಮಿಯನ್ನು ಭೇಟಿಯಾದ ಕೊನೆಯ ಸಂದರ್ಭದಲ್ಲಿ ನಾಗನ ಪ್ರತಿಕ್ರಿಯೆ ಬಹಳ ಸೌಜನ್ಯದ ನೆಲೆಯನ್ನು ಬಿಂಬಿಸುತ್ತದೆ.

"ನೀವು ಎಲ್ಲವನ್ನೂ ಕಳೆದುಕೊಂಡಿರಿ. ನಿಮ್ಮದು ಅನ್ನುವುದು ಏನೂ ಇಲ್ಲ" ಅಂದ ನಾಗ. ಮಾತು ಅವನಿಗೇ ಕೇಳಿಸದಷ್ಟು ಅಸ್ಪಷ್ಟವಾಗಿತ್ತು.

ಕೃಷ್ಣಸ್ವಾಮಿ ಮಾತನಾಡಲಿಲ್ಲ. ಅವನು ಹೇಳುವುದು ಸರಿಯಲ್ಲ ಎನ್ನುವಂತೆ ತಲೆಯಲ್ಲಾಡಿಸಿದರು.

"ನೀವು ಎಂದೂ ಯಾರನೂ ಅಸ್ಪೃಶ್ಯರೆಂದು ಕಂಡಿಲ್ಲ!" ಅಂದ ನಾಗ.

ಅವರ ಮಾತನ್ನೇ ಆಡದಿರುವುದನ್ನು ನೋಡಿ ಭಯದಿಂದ ಹಿಂಜರಿದ. ಕೃಷ್ಣಸ್ವಾಮಿಗಳಿಗೆ ಇದು ಗೊಂದಲ ಉಂಟು ಮಾಡಿರಬೇಕು. ತಾವು ಉದಾರಿ ಎಂದು ಮಾತ್ರ ತಿಳಿದಿದ್ದ ಅವರು ಬೇರೊಂದು ಲೋಕಕ್ಕೆ ಹೋದಂತೆ ಅನ್ನಿಸಿತು. ನಾಗ ಪಿಸುಗುಟ್ಟಿದ. "ನಿಮ್ಮ ನೇಮ ಮತ್ತು ಧ್ಯಾನವನ್ನು ಮಾತ್ರ ಬಿಡಬೇಡಿ, ನಿಮ್ಮ ಮೌನ ಕಸಿದುಕೊಳ್ಳುವ ಹಕ್ಕು ಯಾರಿಗೂ ಇಲ್ಲ. . . ಅದು ನಿಮಗೆ ಆನಂದ ಕೊಡುತ್ತೆ. ಧೈರ್ಯ ಕೊಡುತ್ತೆ. ನಮ್ಮಂಥವರನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಕೊಡುತ್ತೆ ಅದನ್ನು ಬಿಡಬಾರದು. . . ನನ್ನ

---

[೧೬] ಪಿ. ಲಂಕೇಶ್ ಅವರ ಆಯ್ದ ಕಥೆಗಳು: ಪಿ. ಲಂಕೇಶ್, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬, ಪು.೮೮–೧೦೨.

ಎಲ್ಲ ತಿಳುವಳಿಕೆ ಬಂದಿರೋದು ನಿಮ್ಮನ್ನು ನೋಡಿ ಕಲಿತ ನೇಮದಿಂದ ನಾನು ಮನುಷ್ಯ ಅನ್ನೊಂದು ಸ್ಥೈತ ಅದರಿಂದ. . . '[೧೭]

ಶಿಕ್ಷಣ ನಾಗನನ್ನು ಸಮಸ್ಯಾತ್ಮಕ ವ್ಯಕ್ತಿಯನ್ನಾಗಿ ಮಾಡುತ್ತದೆ. ಆದರೆ ಅದು ಅವನಿಗೆ ಆತ್ಮವಿಶ್ವಾಸ, ಆತ್ಮವಿಮರ್ಶೆಯ ಶಕ್ತಿಯನ್ನೂ ಕೊಡುವುದರಿಂದ ಅವನಿಗೆ ಬಿಡುಗಡೆಯ ಮಾರ್ಗವನ್ನು ತೆರೆಯುತ್ತದೆ.

### ೩.೧.೪ 'ದಾಹ' ಕಥೆಯ ನಾನು :

'ಕಲ್ಲು ಕರಗುವ ಸಮಯ' ಸಂಕಲನದ ಮೊದಲ ಕಥೆ ದಾಹ. ಕಾಮ ಪ್ರವೃತ್ತಿಗೆ ವಿಶಿಷ್ಟತೆಯ ತಿರುವನ್ನು ನೀಡುವುದೇ ಈ ಕಥೆಯ ವಸ್ತು. ಈ ಕತೆಯ ಜಗತ್ತು ನಿವೇದಕನ ವೈಯಕ್ತಿಕ ಪರಿಸರಕ್ಕೆ ಸೀಮಿತವಾದದ್ದು. ನಿವೇದಕ ಮತ್ತು ಆತನ ಹೆಂಡತಿ ಸರೋಜ ಬರಿ ಗಂಡ–ಹೆಂಡತಿಯರಷ್ಟೇ ಆಗಿರದೇ, ಸರೋಜ ನಿವೇದಕನಿಗೆ ಗೆಳತಿಯೂ ಆಗಿದ್ದಳು. ತನ್ನ ಹೆಂಡತಿ ಸರೋಜ ಸುಟ್ಟುಕೊಂಡು ಅಕಾಲ ಮರಣಕ್ಕೆ ತುತ್ತಾಗಿರುವ ನೋವು ನಿವೇದಕನಿಗಿದೆ. ಅನಿರೀಕ್ಷಿತವಾಗಿ ತನ್ನನ್ನು ಕಾಣಲು ಬಂದ ಪದ್ಮಾಳ ಉದ್ದೇಶಗಳ ಬಗ್ಗೆ ಆತನಿಗೆ ಸಂಶಯಗಳಿದ್ದರೂ, ಅವುಗಳ ಶುದ್ಧತೆಯ ಬಗ್ಗೆ ಮನವರಿಕೆಯಾದಾಗ ಅವಳೆದುರು ಆತ ತನ್ನನ್ನು ಬಿಚ್ಚಿಕೊಳ್ಳುತ್ತಾನೆ. ತನ್ನ ಮತ್ತು ಸರೋಜಳ ಸಂಬಂಧ, ತನ್ನನ್ನು ಕಾಡಿದ ಅನುಭವದ ದಾಹ, ಅದರ ಒತ್ತಡದಲ್ಲಿ ನಡೆದ ಘಟನಾವಳಿ, ಇದು ಸರೋಜಳನ್ನು ಪ್ರಭಾವಿಸಿದ ರೀತಿ ಎಲ್ಲವನ್ನು ಆತ ಅವಳೆದುರು ಎಳೆ ಎಳೆಯಾಗಿ ಬಿಡಿಸಿಡುತ್ತಾನೆ.

ನಿವೇದಕನು ತನ್ನ ಹುಡುತನದ ಕಾಮದಾಹದಿಂದ ತನ್ನ ಹೆಂಡತಿಯನ್ನು ನಿರ್ಲಕ್ಷಿಸಿದ ಬಗೆಯನ್ನು ಪದ್ಮಾಳ ಮುಂದೆ ಹೇಳಿಕೊಂಡು ತನ್ನ ತಪ್ಪಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ. "ಮನುಷ್ಯ ಮೂಲಭೂತವಾಗಿ ನೀಚ" ಎಂದು ತಲ್ಲಣ ಪಡುತ್ತಾನೆ. "ಅದರಲ್ಲಿ ಹೆಂಗಸರು ಸೇರ್ತಾರಾ" ಎಂದ ಪದ್ಮಾಳಿಗೆ ತನ್ನ ಜೀವನದಲ್ಲಿ ನಡೆದ ಘಟನಾವಳಿಗಳನ್ನು ಬಿಡಿಸಿ ಹೇಳುತ್ತಾನೆ.

---

[೧೭] ಪಿ. ಲಂಕೇಶ್ ಅವರ ಆಯ್ದ ಕಥೆಗಳು, ಪಿ. ಲಂಕೇಶ್, ಅಕ್ಷರ ಪ್ರಕಾಶನ (ಸಾಗರ), ಕರ್ನಾಟಕ–೨೦೦೬, ಪು.೧೦೨.

"ನನ್ನ ಹುಡುಗುತನದ ಹುಮ್ಮಸ್ಸಿನಲ್ಲಿ ಒಂದು ದಿನ ಘೋರ ರೀತಿಯ ಕ್ಲಬ್ಬೊಂದಕ್ಕೆ ಹೋದೆ. ಅದಕ್ಕೆ ಅನುಭವದ ಬಗ್ಗೆ ನನ್ನ ದಾಹ ಮಾತ್ರ ಕಾರಣವಾಗಿತ್ತು. ಗೆದ್ದೆ ಮತ್ತೆ ಸೋತೆ, ಮನೆಗೆ ಬಂದಾಗ ಕ್ಲಬ್ಬಿನಲ್ಲಿ ಆದದ್ದರ ಬಗ್ಗೆ ಪೂರ್ತಿಯಾಗಿ ಸರೋಜಳಿಗೆ ಹೇಳುವುದು ಸಾಧ್ಯವಿತ್ತು. ಹೇಳಿದ್ದರೂ ಅದನ್ನು ನಯಗೊಳಿಸುತ್ತಿದ್ದೆನಾದ್ದರಿಂದ ಹೇಳಲಿಲ್ಲ. ನನ್ನ ಗುಟ್ಟಿನಿಂದ ಅಪಾಯವೇನೂ ಆಗಲಿಲ್ಲ. ಸಂಸಾರ ಹಾಗೇ ಸಹಜವಾಗಿ ನಡೆಯುತಲಿತ್ತು. ಅಷ್ಟರಲ್ಲಿ ನಾನು ನನ್ನ ದಾಹಕ್ಕೆ ಹೊಂದಿಕೊಳ್ಳುತ್ತಿದ್ದೆ. . ."[೧೮]

ಈ ಮಾತುಗಳನ್ನು ಪದ್ಮಾಳ ಮುಂದೆ ಮುಗ್ಧವಾಗಿ ಹೇಳಿಕೊಳ್ಳುತ್ತಾನೆ. ಆತನಲ್ಲಿ ಪಾಪಪ್ರಜ್ಞೆಯ ಜ್ವಾಲೆ ಆವರಿಸುತ್ತಿದೆ. ಮನಸ್ಸನ್ನು ಮೃದು ಮಾಡುತ್ತಿದೆ. ಹಣ್ಣು ಹಣ್ಣು ಮಾಡಿ ಅವನನ್ನು ಕೃಶ್ಯನಾಗುವಂತೆ ಮಾಡುತ್ತಿದೆ. ಈ ಪಾಪಪ್ರಜ್ಞೆಯ ನೋವನ್ನು ತೀವ್ರವಾಗಿ ಅನುಭವಿಸುವುದಷ್ಟೇ ಆಗಿದ್ದರೆ ಕಥೆಯಲ್ಲಿ ಹೊಸತೇನೂ ಇಡುತ್ತಿರಲಿಲ್ಲ. ಆದರೆ ಈ ಕ್ರಿಯೆ ಮುಗಿಯುತ್ತಿರುವಂತೆಯೇ ಇನ್ನೊಂದು ಕ್ರಿಯೆ ಪ್ರಾರಂಭವಾಗುವುದರ ಸೂಚನೆ ಕಥೆಯಲ್ಲಿದೆ.

ಸರೋಜಾ ಬದುಕಿದ್ದಾಗಲೇ ಮೀರಾ, ಸೆಲ್ವಿಯಾ ಮುಂತಾದ ಮುಗ್ಧ ಹುಡುಗಿಯರನ್ನು ಮೋಹಿಸಿದ್ದ, ಕಾಮಾಸಕ್ತಿಯನ್ನು ತೋರಿದ್ದ ನಿವೇದಕ ಸರೋಜ ಸತ್ತ ಬಳಿಕ ಪದ್ಮಾಳ ಮುಂದೆ ತನ್ನ ಪಾಪಪ್ರಜ್ಞೆಯನ್ನು ಬಿಚ್ಚಿಟ್ಟರೂ, ಸಹ ಪದ್ಮಾ ಕೂಡ ತನ್ನ ಜೀವನದಲ್ಲಿ ಇನ್ನೊಬ್ಬ ಸೆಲ್ವಿಯಾಗಿಬಿಡುವ ಸಾಧ್ಯತೆಯನ್ನು ಈತ ಗುರುತಿಸುತ್ತಾನೆ. ಈ ಅಂಶ ಕಥೆಯಲ್ಲಿ ಹೊಸತನ ತೋರಿಸುತ್ತದೆ. ಆಧುನಿಕ ಮನಸ್ಸು ಕೆಲಸ ಮಾಡಿದೆ ಎನ್ನಬಹುದು.

ಆದರೆ ಅಷ್ಟೇ ಮುಗ್ಧತನದಿಂದ, ಸಹಜತೆಯಿಂದ ನಿವೇದಕರಾದ ಸರೋಜಳನ್ನು ಕಳೆದುಕೊಂಡ ವ್ಯಕ್ತಿಗೆ ಸಮಾಧಾನಪಡಿಸಲು ಮತ್ತೆ ಮತ್ತೆ ಮನೆಗೆ ಬರುವ ಪ್ರವೃತ್ತಿ ಕಾಮಾಸಕ್ತಿಯನ್ನು ತೋರಗೊಡುವುದಿಲ್ಲ. ಸಹಜತೆಯನ್ನು ಬಿಂಬಿಸುತ್ತವೆ. ಮನೆಗೆ ಬಂದು ಕಾಫಿ, ತಿಂಡಿ ಮಾಡಿಕೊಡುವುದು ಅವಳ ಸ್ವಾರ್ಥಕ್ಕೆ ಎಂದು ತಿಳಿದಿದ್ದ ನಿವೇದಕ ಅವಳ ಸಹಜ ನಡವಳಿಕೆಯನ್ನು ಕಂಡು ತನಗೆ ಹುಟ್ಟಿದ ಕಾಮಾಸಕ್ತಿಯನ್ನು ದ್ವೇಷಿಸಲು ಪ್ರಯತ್ನಿಸುತ್ತಾನೆ.

---

[೧೮] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೧-೧೦.

ಪದ್ಮಾಳನ್ನು ಉದ್ದೇಶಪೂರ್ವಕವಾಗಿ ತನ್ನಲ್ಲಿ ತಾತ್ಸಾರ ಹುಟ್ಟುವಂತೆ ಮಾಡಿ ಅವಳ ಸಹಾನುಭೂತಿಯನ್ನು ನಿರಾಕರಿಸಿ ಸಂಬಂಧ ಕಡಿದುಕೊಳ್ಳಲು ಯತ್ನಿಸುತ್ತಾನೆ. ಆದರೆ ಪದ್ಮಾಳು ನಿವೇದಕನ ತೋಳಿಗೆ ತೋಳು ತಾಗಿಸಿ ಕುಳಿತರೆ ನಿವೇದಕನ ಕಾಮದ ದಾಹ ಮರುಕಳಿಸುತ್ತದೆ. ತನ್ನ ಪಾಪಪ್ರಜ್ಞೆಯನ್ನು ಪದ್ಮಾಳ ಮುಂದೆ ವ್ಯಕ್ತಪಡಿಸಿದರೂ ಪದ್ಮಳು ಯಾವುದೇ ಪ್ರತಿಕ್ರಿಯೆ ತೋರಿಸಲು ಮುಂದಾಗುವುದಿಲ್ಲ.

ಸರೋಜಳು ಸತ್ತ ನಂತರ ತನ್ನ ಮನಸ್ಸಿಗೆ ನಾಟುವ ಮಾತುಗಳಿಂದ ಸಂತೋಷಪಡಿಸಿದ ಪದ್ಮಾಳನ್ನು ನಿರಾಕರಿಸುವ ಯತ್ನ ಮಾಡಿದರೂ "ತನ್ನ ಯೌವ್ವನದ ಮೈಯನ್ನು ಹಕ್ಕಿಯಷ್ಟು ದಕ್ಷತೆಯಿಂದ ಹತೋಟಿಗೆ ತೆಗೆದುಕೊಂಡು ಕಾರು ಇಳಿದಳು"[೧೯] ಎಂಬ ನಿವೇದಕನ ಕಲ್ಪನೆ ಪುರುಷಪ್ರಧಾನ ಸಮಾಜದ ಕಾಮದಾಹಕ್ಕೆ ಸಂಕೇತವಾಗಿ ನಿಲ್ಲುತ್ತದೆ. ಆದರೆ ಅವಳ ಮುಖದಲ್ಲಿ ಯಾವ ಭಾವನೆಯೂ ಇಲ್ಲದ್ದನ್ನು ನೋಡಿದರೂ ಆತನ ಮನಸ್ಸು ಅವಳಿಗಾಗಿ ಹಂಬಲಿಸುವುದನ್ನು ಬಿಡುವುದಿಲ್ಲ.

"ಕಾರಿನಿಂದ ತಿರುಗಿ ಮನೆಯತ್ತಾ ಸರಸರ ಹೋಗುವಾಗ ಅವಳನ್ನು ನನ್ನ ಕಣ್ಣು ಹಿಂಬಾಲಿಸಿದವು. ಹಿಂದುಗಡೆಯಿಂದ ಸೆಲ್ವಿಯಾ, ಸರೋಜ ಇಬ್ಬರನ್ನೂ ಹೋಲುವ ನಡಿಗೆಯ ಪದ್ಮಾ. . ."[೨೦] ಎಂಬಲ್ಲಿ ನಿವೇದಕನ ಕಾಮಪ್ರವೃತ್ತಿಯ ಉತ್ಕಟತೆ ಸಹಜಕ್ಕಿಂತಲೂ ಭಿನ್ನವಾಗಿ ವ್ಯಕ್ತವಾಗುತ್ತದೆ. ಆದರೆ ಸ್ನೇಹದಿಂದ ಸಮಾಜವನ್ನು ಬದಲಾವಣೆ ಮಾಡಬಹುದು ಎಂಬುದಕ್ಕೆ ಪದ್ಮಾ ಹೇಳಿದ "ನಾಳೆ ಬೆಳಿಗ್ಗೆ ಎಂಟಕ್ಕೆ ಬರಲಾ? ಎಂಬ ಮಾತುಗಳು ಸಾಕ್ಷಿಯಾಗಿವೆ. ಈ ಮಾತನ್ನು ಕೇಳಿದ ನಿವೇದಕನ ಮಾತುಗಳು ಕಥೆಗೆ ಹೊಸ ತಿರುವನ್ನು ನೀಡುತ್ತದೆ.

"ಬೇಡ ನಾನು ಉರಲ್ಲಿರೋಲ್ಲ, ನನ್ನ ಮಾತಿನಿಂದ ಬೋರಾಗಿದ್ದರೆ ಕ್ಷಮಿಸು ಮರಿ"[೨೧] ಎಂಬ ಮಾತಿನಲ್ಲಿ ನಿವೇದಕನನ್ನು ಮತ್ತೊಂದು ಬಾರಿ ಪಾಪಪ್ರಜ್ಞೆ ಜಾಗೃತವಾಗುತ್ತದೆ.

---

[೧೯] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೧-೧೦.

[೨೦] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೧-೧೦.

[೨೧] ಅದೇ, ಪು.೧-೧೦.

ಒಟ್ಟಾರೆ ನಿಜವಾದ ಬದುಕು ಮತ್ತು ಆ ಬದುಕನ್ನು ಶಬ್ದಗಳಲ್ಲಿ ಹಿಡಿಯುವ ನಿವೇದಕನ ಪ್ರಯತ್ನಗಳಲ್ಲಿ ಯಾವಾಗಲೂ ಹೋರಾಟ ನಡದೇ ಇರುವುದರಿಂದ, ಈ ಚಿಕ್ಕ ಜಗತ್ತುಗಳಲ್ಲಿ ನೇರವಾಗಿ ಅವಗತವಾಗುವ ಅರ್ಥಗಳಿಂದ ಆತನ ಕೈಗೆಟುಕದ ಮತ್ತು ಸೂಚನೆಗಳಲ್ಲಿ ಮಾತ್ರ ಸಿಕ್ಕುವ ನಿಗೂಢತೆಯ ಅನುಭವವೇ ಹೆಚ್ಚು ಮಹತ್ವದ್ದಾಗಿದೆ ಎಂಬುದನ್ನು ನಿವೇದಕ ಅರಿಯುವ ಪ್ರಯತ್ನ ಈ ಕಥೆಯ ಕೊನೆಯಲ್ಲಿದೆ.

**೩.೧.೫ ಮುಟ್ಟಿಸಿಕೊಂಡ ತಿಮ್ಮಪ್ಪ :**

ಸ್ಪೃಶ್ಯ–ಅಸ್ಪೃಶ್ಯ ಜಗತ್ತಿನ ಒಂದು ಸಂಕ್ಷಿಪ್ತ ನೋಟ "ಮುಟ್ಟಿಸಿಕೊಂಡವನು" ಕಥೆಯ ವಸ್ತು, 'ಮುಟ್ಟಿಸಿಕೊಳ್ಳು' ಎಂಬ ಪದಕ್ಕೆ ವಿಮರ್ಶಾ ಪರಿಭಾಷೆಯಲ್ಲಿ ಏನೆಲ್ಲಾ ಅರ್ಥ ಕೊಟ್ಟು ನೋಡಬಹುದು. 'ಕಣ್ಣುನೋವು', 'ತಲೆಸ್ನಾನ', 'ಮುಟ್ಟು', 'ನೋವಿನ ಅನಿವಾರ್ಯ ಸ್ಥಿತಿ' ಇವೆಲ್ಲ ಪಡೆದುಕೊಳ್ಳುವ ಅರ್ಥ ಪರಂಪರೆಯನ್ನು ಸಿದ್ಧಾಂತಗಳ ಮೂಲಕ ವಿವರಿಸಿ ಹೇಳಬಹುದು. ಆದರೆ ಈ ಸರಳಕಥೆ ನಮ್ಮ ಮನಸ್ಸನ್ನು ಆವರಿಸಿ ನಿಂತು ನೀಡುವ ಅನುಭವ ಎಲ್ಲಾ ವ್ಯಾಖ್ಯೆಗಳನ್ನೂ ಮೀರಿ ನಿಲ್ಲುವಂತಹದು. ನಮ್ಮ ಸಾಮಾಜಿಕ, ಸಾಂಸ್ಕೃತಿಕ ಬದುಕನ್ನು ಆಕ್ರಮಿಸಿರುವ ಜಾತೀಯತೆಯ ಕಲುಷಿತ ಸಂದರ್ಭದಲ್ಲಿ ಮತ ಧರ್ಮಗಳು ನಿರ್ಮಿಸುತ್ತಿರುವ ದ್ವೇಷದ ಅಸಹನೀಯ ವಾತಾವರಣದಲ್ಲಿ ಮನುಷ್ಯ ಸಂಬಂಧದ ಘನತೆಯನ್ನು ಇದಕ್ಕಿಂತ ಪರಿಣಾಮಕಾರಿಯಾಗಿ ಹೇಳುವುದು ಸುಲಭವಲ್ಲ. ಯಾವುದೇ ಭಾಷೆ ತನ್ನ ಅಭಿವ್ಯಕ್ತಿಯಲ್ಲಿ ಸಾಧಿಸಬಹುದಾದ ಶ್ರೇಷ್ಠ ಸಾಧನೆಯಿದು. ಇಂತಹದೇ ಪ್ರಯತ್ನ ಈ ಕಥೆಯ ಡಾ. ತಿಮ್ಮಪ್ಪ ಮಾಡಿದ್ದಾನೆ.

ಮನುಷ್ಯ ತನ್ನ ಎಲ್ಲ ಸಂಕುಚಿತ ಭಾವನೆಗಳನ್ನು ಮೀರಿ ಸುತ್ತಲಿನ ಸಮಾಜವನ್ನು ಸರಿಯಾಗಿ ಅರಿಯಬೇಕು. ಆಗ ಅಲ್ಲಿನ ಅನಿಷ್ಟಗಳನ್ನು ಹೋಗಲಾಡಿಸುವ ಆಧುನಿಕ ಪ್ರಜ್ಞೆ ಬೆಳೆದು ಸರ್ವರಿಗೂ ಸುಖವಾಗುತ್ತದೆ. ಇದು 'ಮುಟ್ಟಿಸಿಕೊಂಡವನು' ಕಥೆಯ ಆಶಯವಾಗಿದೆ.

ಅಸ್ಪೃಶ್ಯತೆಯ ದುಷ್ಪರಿಣಾಮಗಳನ್ನು ಮನೋದೈಹಿಕ ಹಾಗೂ ಅದರ ಸಾಮಾಜಿಕ ಆಯಾಮಗಳನ್ನು ಕೇಂದ್ರವಾಗಿರಿಸಿಕೊಂಡ ಈ ಕಥೆಯ ನಾಯಕ ಬಸಲಿಂಗ. ತನ್ನ ರೋಗಪೀಡಿತ ಕಣ್ಣನ್ನು ಆಪರೇಷನ್ ಮಾಡಿದ ಡಾಕ್ಟರ್ ಒಬ್ಬ ಅಸ್ಪೃಶ್ಯ ಎಂಬ ಕಾರಣಕ್ಕೆ

ಗೊಂದಲದಲ್ಲಿ ಬೀಳುವ ಈತ ಆ ಕಣ್ಣನ್ನೇ ಕಳೆದುಕೊಳ್ಳುವಷ್ಟು ಮೌಢ್ಯದಲ್ಲಿ ಬೀಳುತ್ತಾನೆ. ಹೊಲೆಯನಾದ ಡಾ|| ತಿಮ್ಮಪ್ಪನು ತನ್ನನ್ನು ಮುಟ್ಟಿ ಆಪರೇಷನ್ ಮಾಡಿದ ಸೂತಕವನ್ನು ಕಳೆದುಕೊಳ್ಳಲು ವೈದ್ಯರ ಎಚ್ಚರಿಕೆಯನ್ನು ಮೀರಿ ಹೆಂಡತಿಯ ಸಲಹೆಯ ಮೇರೆಗೆ ಸ್ನಾನ ಮಾಡುವನು. ಪರಿಣಾಮ ಆಪರೇಷನ್ ಆಗಿದ್ದ ಎಡಗಣ್ಣು ಪುನಃ ನೋವು ತುಂಬಿ ತುಡಿಯತೊಡಗುತ್ತದೆ. ಆದರೆ ಸಾಮಾನ್ಯವಾಗಿ ಸುಳ್ಳು ಹೇಳಲಾಗದ ಈತ ತನ್ನ ಗೊಂದಲದ ಕಾರಣಕ್ಕೆ ಸುಳ್ಳು, ಉಡಾಫೆ, ಜಾತೀಯತೆಯ ಜಾಲದಲ್ಲಿ ಬಿದ್ದು ಡಾ|| ತಿಮ್ಮಪ್ಪನನ್ನು ಅನುಮಾನಿಸಿ ತನ್ನ ಒಂದು ಕಣ್ಣನ್ನೇ ಸಂಪೂರ್ಣವಾಗಿ ಕಳೆದುಕೊಳ್ಳುವನು.

ಕೆಲವೇ ದಿನಗಳಲ್ಲಿ ಮತ್ತೊಂದು ಕಣ್ಣಿನಲ್ಲಿಯೂ ನೋವು ಕಾಣಿಸಿಕೊಂಡೊಡನೆ ಬಸಲಿಂಗನಲ್ಲಿ ಮತ್ತಷ್ಟು ಗೊಂದಲ ಶುರುವಾಗಿ ತನ್ನ ಜಾತಿಯ ನಾಯಕನ ಬೆಂಬಲದೊಂದಿಗೆ ಉತ್ತಮ ಜಾತಿಯ ಅನೇಕ ವೈದ್ಯರನ್ನು ಕಾಣುವನು. ಆದರೆ ಕ್ರಮೇಣ ತನ್ನೆಲ್ಲ ಪ್ರಯತ್ನಗಳೂ ವಿಫಲವಾಗುತ್ತಿರುವುದನ್ನು ಕಂಡುಕೊಂಡು ಜ್ಞಾನೋದಯವಾಗುತ್ತದೆ. ತನ್ನ ಉಡಾಫೆ, ಸುಳ್ಳು, ಜಾತಿ, ಮಠದ ಗುರು ಯಾವುದೂ ತನ್ನ ಕಣ್ಣನ್ನು ಉಳಿಸುವುದಿಲ್ಲ ಎಂಬುದು ಖಾತ್ರಿಯಾದೊಡನೆ ತನ್ನ ಕಣ್ಣನ್ನು ಉಳಿಸಬಲ್ಲ ಏಕೈಕ ವ್ಯಕ್ತಿಯಾದ ಡಾ|| ತಿಮ್ಮಪ್ಪನಲ್ಲಿಗೆ ದೀನನಾಗಿ ಬಂದು ಅವರನ್ನು ಮುಟ್ಟಿ ಅಪ್ಪಿಕೊಂಡು ಗಟ್ಟಿಯಾಗಿ ಅಳತೊಡಗಿದ. ಆಧುನಿಕ ಜಗತ್ತಿನ ಜಾತಿಪದ್ಧತಿಗೆ ಹೊಸ ಹಾದಿ ತೋರಲು ಈ ಕಥೆಯಲ್ಲಿ ಲಂಕೇಶರು ಬಸಲಿಂಗ ಮತ್ತು ಡಾ|| ತಿಮ್ಮಪ್ಪರನ್ನು ಸೃಷ್ಟಿಸಿದಂತಿದೆ. ಒಮ್ಮೆ ಆತನಲ್ಲಿ ಇದ್ದಂತಹ ಅಸ್ಪೃಶ್ಯತೆಯ ಪ್ರಜ್ಞೆ ಈಗ ಇಲ್ಲವಾಗಿ ಮುಗ್ಧತೆಯನ್ನು ಕಂಡ ಪ್ರೇಮಮಯಿ, ಪ್ರಾಮಾಣಿಕ, ಪ್ರತಿಭಾವಂತ ವೈದ್ಯ ತಿಮ್ಮಪ್ಪ ಆತನನ್ನು ಸಮಾಧಾನಪಡಿಸಿ ಅಭಯ ನೀಡಿ ತಮ್ಮ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸುವನು.

ಹೀಗೆ ಸುಳ್ಳುಗಳಿಂದ ಮುಕ್ತವಾಗುವ ಬಸಲಿಂಗ ಮಗುವಿನಂತಾಗುವನು. ತಲತಲಾಂತರದಿಂದ ಸಮಾಜದಲ್ಲಿ ಜಡ್ಡುಗಟ್ಟಿ ಹೋಗಿರುವ ಮಡಿ–ಮೈಲಿಗೆ, ಸ್ಪೃಶ್ಯ–ಅಸ್ಪೃಶ್ಯ ಮುಂತಾದ ಭಾವನೆಗಳಿಗೆ ಪ್ರಾಯಶ್ಚಿತ್ತ ಪಡುವ ಅಥವಾ ವಿಷಾಧವನ್ನು ವ್ಯಕ್ತಪಡಿಸುವ ನೆಲೆಯಲ್ಲಿ ಬಸಲಿಂಗನ ಪಾತ್ರ ಯಶಸ್ವಿಯಾಗಿ ಮೂಡಿಬಂದಿದೆ. ಈ ಕಥೆ ಸಾಮಾಜಿಕ ತಿಳುವಳಿಕೆ ಮತ್ತು ಸುಧಾರಣೆ ಜೊತೆಗೆ ವ್ಯಕ್ತಿಗಳ ಅಂತರಂಗದ ಶೋಧನೆಯನ್ನು ಹೇಳುತ್ತದೆ. ಒಟ್ಟಾರೆ ಸಮಾಜದ ವರ್ಣ ಸಂಬಂಧಗಳ ಸಂಕೀರ್ಣ ಸ್ವರೂಪವನ್ನು ಒಂದು ರೂಪಕದ ಮಟ್ಟಕ್ಕೆ ಕೊಂಡೊಯ್ದಿರುವ ಅದ್ಭುತ ಕಥೆ ಲಂಕೇಶರ 'ಮುಟ್ಟಿಸಿಕೊಂಡವರು'.

**೩.೧.೬ ಅಸಹಾಯಕತೆಯ ವಿರುದ್ಧ ದಿಟ್ಟಹೆಣ್ಣಾಗಿ ಚೆಲುವಮ್ಮ :**

ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣು ಹಿಂದಿನಿಂದಲೂ ದಬ್ಬಾಳಿಕೆಗೆ, ಶೋಷಣೆಗೆ ಒಳಗಾಗಿ ನರಳುತ್ತ ಬಂದಿದ್ದಾಳೆ. ಗಂಡಿನ ದರ್ಪ, ಧಾಷ್ಟ್ಯ, ಅವಿವೇಕ, ಬೇಜವಾಬ್ದಾರಿಗಳಿಗೆ ಅಮಾಯಕ ಹೆಣ್ಣು ನಲುಗಿ ಹೋಗುವ, ತನ್ನ ಅಸ್ತಿತ್ವವನ್ನೇ ಕಳೆದುಕೊಂಡುಬಿಡುವ ಸ್ಥಿತಿಯನ್ನು "ಉರಿದ ಊರಿನವರು" ಕಥೆಯಲ್ಲಿ ನೋಡುತ್ತೇವೆ. ದರ್ಪ, ಅವಿವೇಕ, ಬೇಜವಾಬ್ದಾರಿಗಳ ನೆಲೆಯಲ್ಲಿ ಬೈರಪ್ಪ ಮಾಸ್ಟರ್, ಚಿಕ್ಕಲಿಂಗ, ಕರಿಸಿದ್ದ, ಪೋಲಿ ಕೃಷ್ಣ, ಪೇಪರಂಗಡಿ ನಾಗರಾಜ, ಹಿರೇಗೌಡ್ರ ರಂಗ ಕಂಡುಬರುತ್ತಾರೆ. ಇವರೆಲ್ಲರೂ ಸಾಮಾಜಿಕ ಕಟ್ಟಳೆಗಳನ್ನು ಮುರಿದು ಪ್ರೇಮ ಪ್ರೀತಿಯ ಕಾವಿನಲ್ಲಿ ಹೊಸ ಬದುಕಿಗಾಗಿ ಹಂಬಲಿಸುವ ಹಿಂಸೆಯ ನೆಲೆಯಲ್ಲಿ ಕಾಣಿಸುತ್ತಾರೆ. ಈ ಹಿಂಸೆಯನ್ನು ಪೊರೆಯುವ ಭ್ರಷ್ಟರ ನಡುವೆಯೂ ದಿಟ್ಟಹೆಣ್ಣಾಗಿ ಚೆಲುವಮ್ಮ ಕಂಡುಬರುತ್ತಾಳೆ. ಹೆಣ್ಣಿನ ಮನಸ್ಸಿನ ಸೂಕ್ಷ್ಮತೆ, ಅತಂತ್ರತೆ ಅಸಹಾಯಕತೆಗಳು ಭಾವಪೂರ್ಣವಾಗಿ ಈ ಕಥೆಯಲ್ಲಿ ಮೂಡಿಬಂದಿವೆ. ಗಂಡು ದಿಕ್ಕಿಲ್ಲದ ಕುಟುಂಬದ ಮೇಲೆ ಸಮಾಜದ ಕಣ್ಣು ಹೇಗಿರುತ್ತದೆ. ಅದನ್ನು ಎದುರಿಸಲು ಎಂತಹ ದಿಟ್ಟತನ ತೋರಬೇಕು ಎಂಬುದಕ್ಕೆ ಚೆಲುವಮ್ಮ ಸಾಕ್ಷಿಯಾಗಿ ನಿಂತಿದ್ದಾಳೆ. ತನ್ನ ಕುಟುಂಬವನ್ನು ಗಂಡಿನ ದರ್ಪದಿಂದ ಉಳಿಸಿಕೊಳ್ಳಲು ಚೆಲುವಮ್ಮ ಕೊನೆಯವರೆಗೂ ದಿಟ್ಟತನದಿಂದ ಹೋರಾಡಿ ಕೊನೆಗೆ ಸೋಲುಣ್ಣುವುದೇ ವಿಪರ್ಯಾಸ. ಅದಕ್ಕೆ ಕಾರಣ ಸಮಾಜದ ಸ್ಥಿತಿಗತಿಗಳು ಎಂಬುದು ಕಥೆಯ ವಸ್ತು. ಇದೆಲ್ಲದರ ನಡುವೆ ಕಥೆಯ ಪ್ರಾರಂಭದಿಂದ ಕೊನೆಯವರೆಗೂ ಓದುಗರ ಮನದಾಳದಲ್ಲಿ ನಿಲ್ಲುವ ವಯಸ್ಸಾದ ಸಾಂಪ್ರದಾಯಿಕತೆಯ ಪಾತ್ರ ಆಗಾಗ ಬಂದು ಹೋಗುತ್ತದೆ. ಅದುವೇ ಕೆಂಚಜ್ಜನ ಪಾತ್ರವಾಗಿದೆ. ಸಮಾಜದಲ್ಲಿ ನಡೆಯುವ ಸೂಕ್ಷ್ಮಗಳನ್ನು ಎಚ್ಚರಿಕೆಯಿಂದ ವೀಕ್ಷಿಸುವ ಪಾತ್ರವಾಗಿ ನಮಗೆ ಗೋಚರಿಸುತ್ತದೆ.

ಚೆಲುವಮ್ಮನ ಗಂಡಸಿಲ್ಲದ ಮನೆಗೆ ರಾತ್ರಿಯ ವೇಳೆ ಹಳ್ಳಿಯ ಪುಂಡರಾದ ಚಿಕ್ಕಲಿಂಗ ಮತ್ತು ಕರಿಸಿದ್ಧ ನುಗ್ಗಿ ತನ್ನ ತಂಗಿಯಾದ ಗಿರಿಜಾಳನ್ನು ಹಿಡಿಯಲು ಹೋದಾಗ ಚೆಲುವಮ್ಮ ಕೂಡಲು ಉದರಿಕೊಂಡು ಎಂಟು ದಿಕ್ಕುಗಳಿಗೂ ಕೇಳಿಸುವಂತೆ "ಲೋಫರ್ ಮುಂಡೆಗಂಡ್ರಾ, ನಿಮ್ಮನ್ನೆಲ್ಲಿ ಅರೆಸ್ಟ್ ಮಾಡ್ಸಿ ಲಾಕಪ್ಪಿನಲ್ಲಿ ಹಾಕಿಸದಿದ್ರೆ ನನ್ನ ಹೆಸರು ಚೆಲುವಿ ಅಲ್ಲ ಕಣ್ರುಲಾ। ನಿಮ್ಮ ಮನೆಗೆ ಬೀಗ ಹಾಕಿಸಿ ಎಕ್ಕಾ ಎಳೋ ಹಾಗೆ ಮಾಡ್ತೀನಿ– ನಾನು ಎಂಥಾ ದ್ರೌಪದಿ ಅನ್ನೋದನ್ನ ತೋರಿಸಿಯೇ ತೋರಿಸ್ತೀನಿ" ಎಂದು ಬಯ್ಯುತ್ತಾಳೆ.

"ಏನಾತು ಚೆಲುವಮ್ಮ?" ಎಂದ ಕೆಂಚಜ್ಜನ ಮಾತಿಗೆ "ನಿಂಗ್ಯಾಕೆ ಹೋಗೋ ಸುಮ್ಮನೆ ಜಗುಲಿ ಹಿಡಿದು ಮಲಕ್ಕೋ"[೨೨] ಎಂದು ಕೆಂಡವಾಗುತ್ತಾಳೆ.

ಈ ಮಾತುಗಳು ಪುರುಷಪ್ರಧಾನ ಸಮಾಜವನ್ನು ಎದುರಿಸಲು ಸನ್ನದ್ಧಳಾದ ದಿಟ್ಟ ಹೆಣ್ಣನ್ನು ವಿವರಿಸುವಂತಿದೆ. ಚೆಲುವಮ್ಮ ಈ ಮಾತುಗಳಿಂದ ಪುರುಷಪ್ರಧಾನ ವ್ಯವಸ್ಥೆಗೆ ಸವಾಲಾಗುತ್ತಾಳೆ. ಇದರ ಹಿಂದೆ ಭೈರಪ್ಪನಂತಹವರು ಇದ್ದಾರೆ ಎಂಬುದು ಮುಂದೆ ಓದುಗನಿಗೆ ಗೊತ್ತಾಗದಿರದು. ಭೈರಪ್ಪಮಾಸ್ಟರ್‌ರಿಗೂ ಚೆಲುವಮ್ಮನಿಗೂ ಏನೋ ಸಂಬಂಧವಿದೆ ಎಂದು ಊರಿಗೇ ಊರೇ ಮಾತಾಡಿಕೊಳ್ಳುತ್ತದೆ. ಕಥೆಯನ್ನು ಓದಿದ ನಮಗೆ ಇದು ಸ್ಪಷ್ಟವಾಗುತ್ತಾ ಹೋಗುತ್ತದೆ.

ಹಳ್ಳಿಯ ಪುಂಡರ ವಿರುದ್ಧ ಪೊಲೀಸಿಗೆ ಕಂಪ್ಲೇಂಟ್ ಕೊಡಲು ಚೆಲುವಮ್ಮ ಅಣಿಯಾದದ್ದು ದಿಟ್ಟತನದ ಮತ್ತೊಂದು ಹೆಜ್ಜೆ. ಸರ್ಕಲ್ ಇನ್ಸ್‌ಪೆಕ್ಟರ್ ರುದ್ರಯ್ಯ ಕರಿಸಿದ್ಧ ಮತ್ತು ಚಿಕ್ಕಲಿಂಗರನ್ನು ಎಳೆದುಕೊಂಡು ಚಾರ್ಜ್ ಮಾಡಲು ಹಿಂಜರಿಯುತ್ತಾನೆ. ಆಗ ರುದ್ರಯ್ಯನಿಗೆ ಗಿರಿಜಾಳ ಅತ್ಯಾಚಾರದ ಪ್ರಯತ್ನದ ಘಟನೆಯ ಬಗ್ಗೆ ಕ್ರಮ ತೆಗೆದುಕೊಳ್ಳದೇ ಇದ್ದರೆ ತಾನು, ತನ್ನ ತಂಗಿ ಗಿರಿಜ, ಮಗ ಕುಮಾರ ಪೊಲೀಸ್ ಸ್ಟೇಷನ್ ಮುಂದೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿಕೊಳ್ಳುತ್ತೇವೆ ಎಂಬ ಮಾತು ಚೆಲುವಮ್ಮನ ದಿಟ್ಟತನದ ಮತ್ತೊಂದು ಮಾದರಿಯಾಗಿದೆ.

ಪೊಲೀಸರ ಏಟಿನಿಂದ ಕುಗ್ಗಿದ ಕರಿಸಿದ್ಧ "ಆಕೆ ಮನೆಗೆ ನುಗ್ಗೋರು ನಮ್ಮಂಥ ಬಡವುಲ್ಲ– ಹಿರೇಗೌಡ್ರು ರಂಗ, ಪೋಲಿಕೃಷ್ಣ, ಪೇಪರಂಗಡಿ ನಾಗರಾಜ ಯಾರಾದ್ರೂ ನುಗ್ಗಿರಬೌದು ಆಕೆಯ ಉಸಾಬರೀನೇ ನಮಗೆ ಬೇಡ ಸಾರ್"[೨೩] ಎನ್ನುವಲ್ಲಿ ದಿಕ್ಕಿಲ್ಲದ ಹೆಣ್ಣನ್ನು ಸಮಾಜ ನೋಡುವ ದೃಷ್ಟಿ ಇದಾಗಿದೆ.

ಈ ಅತ್ಯಾಚಾರದ ಪ್ರಕರಣದ ವಿರುದ್ಧ ಭೈರಪ್ಪ ಮಾಸ್ತರ್, ಚೆಲುವಮ್ಮ ಬಹಳ ವೀರಾವೇಶದಿಂದ ಹೋರಾಟ ಮಾಡುತ್ತಾರೆ. ಚೆಲುವಮ್ಮನ ಈ ಹೋರಾಟ, ಹಠಮಾರಿತನ, ಅಸಹಾಯಕತೆಯ ಹಿಂದೆ ಬದುಕುವ ಹಂಬಲವಿದೆ. ಈ ಹೋರಾಟದ ಹಿಂದೆ ಭೈರಪ್ಪ ಮಾಸ್ತರಿಗೆ ಎಂತದೋ ಲಾಭ ಪಡೆಯುವ ಹಂಬಲವಿದೆ. ಒಟ್ಟಾರೆ ಸಮಾಜ ಅತ್ಯಾಚಾರಕ್ಕೆ

---

[೨೨] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ, ಪಿ., ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೬೬.

[೨೩] ಅದೇ, ಪು.೭೦.

ಒಳಪಟ್ಟ ಹೆಣ್ಣನ್ನು ಮುಂದೆ ಹೇಗೆ ನೋಡಬಹುದು ಎಂಬ ಪರಿಜ್ಞಾನವೇ ಇಲ್ಲವೆಂಬಂತೆ ಚೆಲುವಮ್ಮ ಹಠಮಾರಿತನವನ್ನು ವ್ಯಕ್ತಪಡಿಸುತ್ತಾಳೆ. ಆದರೆ ಗಿರಿಜೆಯ ಪ್ರೇಮ ಪ್ರಸಂಗ ಚೆಲುವಮ್ಮನಿಗೆ ತಿಳಿಯದು. ಚೆಲುವಮ್ಮ ಕಥೆಯ ಕಡೆಯವರೆಗೂ ಹಠಮಾರಿತನದಿಂದ, ಹೋರಾಟದ ಪ್ರವೃತ್ತಿಯಿಂದ ಬಹಳ ವೀರಾವೇಶದಿಂದ ಪುರುಷಪ್ರಧಾನ ಸಮಾಜದ ವಿರುದ್ಧ ಹೋರಾಟ ನಡೆಸುತ್ತಾಳೆ. ಇಡೀ ಊರನ್ನೇ ಎದುರಿಸಲು ಸಿದ್ಧಳಾಗುತ್ತಾಳೆ. ಕೊನೆಗೆ ಹಿಂದಿನಿಂದ ನಡೆದುಬಂದ ಗ್ರಾಮ ಸಮಾಜದ ಸಂವೇದನೆಗಳಿಗೆ, ಕಟ್ಟುಕಟ್ಟಳೆಗಳಿಗೆ ಬಲಿಯಾಗುತ್ತಾಳೆ. ತನ್ನ ತಂಗಿಯಾದ ಗಿರಿಜೆಯ ಸ್ವಾಭಾವಿಕ ಪ್ರೇಮದ ಕ್ರಿಯೆಯಲ್ಲಿ ಚೆಲುವಮ್ಮನ ಬಂಡಾಯದ ಆರ್ಭಟಗಳೆಲ್ಲಾ ಸುಟ್ಟು ಹೋಗುತ್ತವೆ.

ಸ್ತ್ರೀಪ್ರಧಾನ ಕುಟುಂಬವೊಂದನ್ನು ಶೋಷಿಸುವ ಹಲವು ಪಟ್ಟಭದ್ರಹಿತಾಸಕ್ತಿಗಳಿಂದ ಕೂಡಿರುವ ಬೈಲಳ್ಳಿ ಸಾಂಪ್ರದಾಯಿಕ ಗ್ರಾಮವಾಗಿ ನಮಗೆ ಕಂಗೊಳಿಸುತ್ತದೆ. ತನ್ನ ಮತ್ತು ತನ್ನ ಮನೆಯ ಅಸ್ಥಿತ್ವವನ್ನು ಉಳಿಸಿಕೊಳ್ಳಲು ಚೆಲುವಮ್ಮನ ಮೌಖಿಕ ಸಂವೇದನೆ ಕೊನೆಗೆ ವಿಕೋಪಕ್ಕೆ ಹೋಗುತ್ತದೆ. ತನ್ನ ಪರವಾಗಿದ್ದ ಭೈರಪ್ಪಮಾಸ್ತರ್ ಸಹ ಕೊನೆಗೆ ಊರವರ ಜೊತೆ ರಾಜಿ ಮಾಡಿಕೊಳ್ಳಬೇಕೆಂದೂ ಅಂಗಲಾಚಿದಾಗ, ಅದನ್ನು ಧಿಕ್ಕರಿಸಿ ಒಂಟಿಯಾಗಿ ಹೋರಾಟಕ್ಕೆ ಮುಂದಾದ ಚೆಲುವಮ್ಮ ಸಾಂಪ್ರದಾಯಿಕ ಸಮಾಜಕ್ಕೆ ಸವಾಲಾಗಿ ನಿಲ್ಲುತ್ತಾಳೆ.

ಅತ್ಯಾಚಾರದಿಂದ ವಿಕೋಪಕ್ಕೆ ಹೋದ ಈ ಪ್ರಸಂಗ ಕೊನೆಗೆ ಮುಕ್ತಾಯ ವಾಗುವುದು ದುರಂತದಲ್ಲಿ.

"ಜೂನ್ ಹತ್ತನೆ ತಾರೀಖು ರಾತ್ರಿ ಚೆಲುವಮ್ಮನ ಮನೆ ಹತ್ತಿಕೊಂಡು ಉರಿಯತೊಡಗಿತು. ಹದಿನೈದನೇ ತಾರೀಖಿಗಾಗಿ ಕಾಯುತ್ತಿದ್ದ ಜನರಿಗೆ ಕೊಂಚ ನಿರಾಶೆಯಾದರೂ ಹತ್ತನೇ ತಾರೀಖೇ ಅವರ ದೊಡ್ಡ ಗೋಳು ಶುರುವಾಯಿತು. ಊರ ಜನರೆಲ್ಲ ಊರು ಬಿಟ್ಟು ಓಡಿ ಹೋದರು. ಭೈರಪ್ಪ ಕೂಡಲೇ ಹದಿನೈದು ದಿನ ರಜೆ ತೆಗೆದುಕೊಂಡು ವಿದ್ಯಾರ್ಥಿಗಳನ್ನು ಶೈಕ್ಷಣಿಕ ಪ್ರವಾಸದ ಮೇಲೆ ಕರೆದುಕೊಂಡು ಹೋದ. ಗಿರಿಜ ಮತ್ತು ಕುಮಾರ ಬೆಂಕಿಯಿಂದ ತಪ್ಪಿಸಿಕೊಂಡರು. ಚೆಲುವಮ್ಮ ತಪ್ಪಿಸಿಕೊಳ್ಳುವ ಸ್ಥಿತಿಯನ್ನು ದಾಟಿದ್ದಳು. . ."[೨೪]

---

[೨೪] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ, ಪಿ., ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೭೬.

ಕಥೆಯ ಪ್ರಾರಂಭದಿಂದ ಕೊನೆಯವರೆಗೂ ಬಹಳ ಧೀರಳಾಗಿ ಹೋರಾಟದ ಅಖಾಡಕ್ಕಿಳಿದ ಚೆಲುವಮ್ಮ ಕೊನೆಗೆ ದುರಂತದಲ್ಲಿ ಕೊನೆಯಾಗುತ್ತಾಳೆ. ಅಂದರೆ ಈಕೆಯ ಹೋರಾಟಕ್ಕೆ ತನ್ನ ತಂಗಿ ಗಿರಿಜೆಯಿಂದ ಹಿಡಿದು ಯಾರು ಸಹಕಾರ ನೀಡುವುದಿಲ್ಲ ಚೆಲುವಮ್ಮ ಈ ಕಥೆಯಲ್ಲಿ ಇಲ್ಲಿಯವರೆಗೂ ಜಡ್ಡುಗಟ್ಟಿರುವ ಸಮಾಜವನ್ನು ತೀಕ್ಷ್ಣವಾಗಿ ಎದುರಿಸುವ ಪ್ರಯತ್ನಕ್ಕೆ ಕೈಹಾಕಿ ಕೈಸುಟ್ಟುಕೊಳ್ಳುತ್ತಾಳೆ. ಲಂಕೇಶರ ಈ ಕಥೆ ಹೆಣ್ಣು ಮನಸ್ಸು ಮಾಡಿದರೆ ಏನು ಬೇಕಾದರೂ ಮಾಡುತ್ತಾಳೆ ಎಂಬುದಕ್ಕೆ ಉದಾಹರಣೆಯಾಗಿ ಬರೆದಂತಿದೆ. ಅಂತೆಯೇ ಇವಳ ಪ್ರತಿಭಟನೆಯಿಂದ ಇಡೀ ಊರಿನ ಜನರು ಊರನ್ನು ತ್ಯಜಿಸುವ ಸ್ಥಿತಿಗೆ ತಲುಪುತ್ತಾರೆ.

ಚೆಲುವಮ್ಮ ಸತ್ತ ಬಳಿಕ "ಭೈರಪ್ಪ ಇವಳು ಮಾನಸಿಕ ಅಸ್ವಸ್ಥಳೆಂದು ಹೇಳಿಕೆ ಕೊಟ್ಟು ಎಲ್ಲಾ ಕೇಸುಗಳನ್ನು ರದ್ದು ಮಾಡಲು ನೇರವಾದ. ಪೋಲಿ ಕೃಷ್ಣ ಗಿರಿಜಳನ್ನು ಸರಳ ವಿವಾಹವಾದ"[೨೫] ಎಂಬಲ್ಲಿ ಚೆಲುವಮ್ಮನ ಹೋರಾಟದ ಫಲ ವಿಫಲಗೊಂಡಿತು ಎಂಬುದರ ಅರಿವು ನಮಗೆ ಆಗದಿರದು. ಪ್ರೇಮ ಪ್ರಕರಣದ ವಿರುದ್ಧ ಹೋರಾಡಲು ಅಖಾಡಕ್ಕಿಳಿದ ಚೆಲುವಮ್ಮ ದುರಂತದಲ್ಲಿ ಕೊನೆಯಾಗುತ್ತಾಳೆ. ಊರು ಮೊದಲಿನಂತೆ ಜೀವಿಸಲು ಪ್ರಾರಂಭಿಸುತ್ತದೆ. ಆದರೆ "ಬೆಂಕಿಗೆ ಕಾರಣರಾರು ಎನ್ನುವುದು ನಿಗೂಢವಾಗಿಯೇ ಉಳಿಯಿತು."[೨೬]

ಒಟ್ಟಾರೆ ಅಸಹಾಯಕತೆಯ ವಿರುದ್ಧ ಹೋರಾಟದ ಅಖಾಡಕ್ಕಿಳಿದ ಚೆಲುವಮ್ಮ ಸಮಾಜದ ಬದಲಾವಣೆಯನ್ನು ಬಯಸುವ ಮುಖ್ಯನೆಲೆಯಲ್ಲಿ ಕಾಣಿಸುತ್ತಾಳೆ. ತಾನು ಅಂದುಕೊಂಡ ಕೆಲಸವನ್ನು ತನ್ನ ಸಾವಿನವರೆಗೂ ಮಾಡಿಯೇ ತೀರುತ್ತಾಳೆ. ಇಡೀ ಊರನ್ನೇ ಎದುರಿಸಿ ನಿಂತ ಚೆಲುವಮ್ಮನ ವ್ಯಕ್ತಿತ್ವ ಗಟ್ಟಿತನದ ನೆಲೆಯಲ್ಲಿ ಕಾಣಿಸುತ್ತದೆ.

**೩.೧.೭ ರೊಟ್ಟಿಯ 'ಆಕೆ' :**

ಗ್ರಾಮೀಣ ಪರಿಸರದಲ್ಲಿ ಹುಟ್ಟಿ ಬೆಳೆದ ಹೆಣ್ಣು ಪಟ್ಟಣ ಸಂಸ್ಕೃತಿಗೆ ಒಗ್ಗಿಕೊಳ್ಳಲು ವಿಫಲಳಾದ ದುರಂತವನ್ನು 'ರೊಟ್ಟಿ' ಕಥೆಯಲ್ಲಿ ನೋಡಬಹುದು. ರೊಟ್ಟಿ ಕಥೆಯನ್ನು ಕುರಿತು ಅಡಿಗರು ೧೯೭೦ರಲ್ಲಿ ಈ ರೀತಿ ಹೇಳಿದ್ದರು.

---

[೨೫] ಅದೇ, ಪು.೭೬.

[೨೬] ಅದೇ, ಪು.೭೬.

"ಒಬ್ಬ ಮನುಷ್ಯ ಮನುಷ್ಯನಾಗಿಯೇ, ವ್ಯಕ್ತಿಯಾಗಿಯೇ ಇದ್ದಾಗ ಅವನಿಗೂ ಇನ್ನೊಬ್ಬನಿಗೂ ನಡುವೆ ವ್ಯವಹಾರ ಸಾಧ್ಯವಾಗುತ್ತದೆ. ಆದರೆ ಅವನು ಗುಂಪಿನ ಅಂಗವಾದಾಗ ಎಂಥ ಭಯಂಕರ ಮೃಗವಾಗುತ್ತಾನೆ ಎಂಬ ಸಾಮಾಜಿಕ ಸತ್ಯವನ್ನು ಇಷ್ಟು ಚೆನ್ನಾಗಿ ಚಿತ್ರಿಸುವ ಈ ಕಥೆ ಕನ್ನಡದಲ್ಲೇ ಒಂದು ಅತ್ಯುತ್ತಮ ಸಣ್ಣಕಥೆ ಎನ್ನಬೇಕು."[೨೭]

ಹಳ್ಳಿಯ ಮುಗ್ಧ ಹೆಣ್ಣಿನ ಹಸಿಹಸಿ ಸಂವೇದನೆಗಳು ರೊಟ್ಟಿ ಕಥೆಯು ಆಕೆಯಲ್ಲಿ ಮಡುಗಟ್ಟಿ ನಿಂತಿವೆ. ಹಳ್ಳಿಯಿಂದ ತನ್ನ ಮಗಳು ಮತ್ತು ಮೊಮ್ಮಗಳನ್ನು ನೋಡಲು ಬಂದಿದ್ದ ಆಕೆ ಪಟ್ಟಣ ಸಂಸ್ಕೃತಿಯನ್ನು ಕಂಡು ವಿಸ್ಮಯಳಾಗುತ್ತಾಳೆ.

"ಸಿಂಗಾರಪೇಟೆಯ ಸ್ಟೇಷನ್‌ನಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡುವ ಕೂಲಿಗಳು; ಹರಿದ ಬಟ್ಟೆ, ಕೊಳಕು ಮೈ, ಕಂಕುಳಲ್ಲಿ ಮಕ್ಕಳು, ಸ್ಟೇಷನ್ ತುಂಬ ಇಂಥವರು. ಗೋಡೆಗಳ ಮೇಲೆಲ್ಲ ತನಗೆ ಅರ್ಥವಾಗದ ಬಣ್ಣದ ಚೀಟಿಗಳು, ಬೈದಾಟಗಳು, ಸ್ಟೇಷನ್ನಿನ ಹಿಂಭಾಗಕ್ಕೆ ಒತ್ತಿಟ್ಟಂದ, ನೆಲದಿಂದ ಆಕಾಶದ ತನಕ ಹೊಗೆ, ಊರೊಳಗೆ ಹೋದರೆ ಹತ್ತಾರು ಮೆರವಣಿಗೆ, ಅಂಥ ಹಲವು ಮೆರವಣಿಗೆಯ ಬ್ಯಾನರು, ಬೋರ್ಡುಗಳನ್ನು ತಿಳಿಯಲು ಯತ್ನಿಸಿದಳು ಸಾಧ್ಯವಾಗಲಿಲ್ಲ."[೨೮]

ಸಿಂಗಾರಪೇಟೆಯ ಸ್ಟೇಷನ್ನಿನ ದೃಶ್ಯದ ವರ್ಣನೆಯಿಂದ ಕಥೆ ಆರಂಭವಾಗುತ್ತದೆ. ಹಳ್ಳಿಯಿಂದ ಬಂದ ಹೆಣ್ಣಿಗೆ ಆಧುನಿಕ ಜೀವನದ ಪರಿಚಯವಾಗುತ್ತದೆ. ಆಧುನಿಕ ಜಗತ್ತಿಗೆ ಕಾಲಿಟ್ಟಾಗ ಅವಳಲ್ಲಿ ಒಂಟಿತನದ ಪ್ರಜ್ಞೆ ಕಾಡುತ್ತದೆ. ನಂತರ ಬಾಣಂತಿ ಮಗಳ ಹಾರೈಕೆ ಮುಗಿಸಿ ತನ್ನ ಊರಿಗೆ ಹೊರಟಿರುವ ಹಳ್ಳಿಯ ಹೆಣ್ಣುಮಗಳು. ಅವಳ ಮನಸ್ಸಿನಲ್ಲಿ ಮಗಳ ಸಂಸಾರದ ಬಗ್ಗೆ ಚಿಂತೆ ಹಾಗೂ ಮಕ್ಕಳು ಮರಿ ಆದಷ್ಟು ಬೇಗ ಸೇರಿಸಿಕೊಳ್ಳಬೇಕೆನ್ನುವ ಆತುರ ಆವರಿಸಿದೆ. ಪ್ಲಾಟ್‌ಫಾರ್ಮಿನಲ್ಲಿ ನೆರೆದ ವ್ಯಕ್ತಿಗಳಲ್ಲಿ ನಿಂತ ಒಬ್ಬ ಮನುಷ್ಯ ಅವಳ ಕುತೂಹಲವನ್ನು ಕೆರಳಿಸುತ್ತಾನೆ.

ತನ್ನ ಮಗಳು ಕಟ್ಟಿಕೊಟ್ಟಿದ್ದ ರೊಟ್ಟಿಯ ಬುತ್ತಿಯನ್ನು ಬಿಚ್ಚಿ ತಿನ್ನ ಬೇಕೆನ್ನುವ ವೇಳೆಗೆ ಪ್ಲಾಟ್ ಫಾರ್ಮಿನಲ್ಲಿ ಇದ್ದ ಮನುಷ್ಯನನ್ನು ನೋಡುತ್ತಾಳೆ.

---

[೨೭] ಸಾಹಿತ್ಯ ಸಂಸ್ಕೃತಿ, ನರಹಳ್ಳಿ ಬಾಲಸುಬ್ರಮಣ್ಯಂ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೧೯೯೮, ಪು.೧೩೭.

[೨೮] ಪಿ. ಲಂಕೇಶರವರ ಆಯ್ದ ಕಥೆಗಳು, ಅಕ್ಷರ ಪ್ರಕಾಶನ, ೨೦೦೬, ಪು.೨೬.

"ತಲೆಯಿಂದ ಇಳಿದ ಉದ್ದನೆಯ ಕೂದಲು, ಭುಜದಿಂದ ಅಡಿಯವರೆಗೆ ಹಸಿರಾದ ಕೊಳಕು ಬಟ್ಟೆ, ಮುಖದ ತುಂಬಾ ಕೋಪ, ನೋವು. ರೈಲು ಒಂದು ಗಂಟೆ ತಡವಿದ್ದುದರಿಂದ ಅವಳಿಗೆ ಕಾಯದೆ ಗತ್ಯಂತರವಿಲ್ಲ. ಹಸಿವೆ ಬೇರೆ, ಮಗಳು ಕೊಟ್ಟ ರೊಟ್ಟಿ ತಿನ್ನುವುದಕ್ಕಾಗಿ ಪ್ಯಾಕೆಟ್ ಬಿಚ್ಚಿ ರೊಟ್ಟಿ ಹೊರ ತೆಗೆದಾಗ ಆ ವ್ಯಕ್ತಿ ಅವೆಲ್ಲವನ್ನು ಕಸಿದುಕೊಂಡು ತಿನ್ನತೊಡಗುತ್ತಾನೆ. "ಅವನಿಗೆ ಜಗತ್ತಿನ ಪರಿವೆಯೇ ಇದ್ದಂತಿರಲ್ಲಿಲ್ಲ. . . ಅವನ ಏಕಾಗ್ರತೆಗೆ ಜಗತ್ತು ಮೂಕವಾದಂತಿತ್ತು".[೨೯] ಹಸಿವು, ಬಡತನಗಳನ್ನು ಪ್ರಗತಿಶೀಲ ಲೇಖಕರೂ ತಮ್ಮ ಕಥೆಗಳ ವಸ್ತುವಾಗಿ ಬಳಸಿಕೊಂಡಿದ್ದರು. ಅಂತಹ ಹಸಿವಿನ ಮತ್ತು ಬಡತನದ ತೀವ್ರತೆ ಮನುಷ್ಯನ ಬದುಕಿನಲ್ಲಿ ಹೇಗೆ ಎಂತಹ ಕೆಲಸಗಳಿಗೂ ನೂಕುತ್ತದೆ ಎಂಬುದಕ್ಕೆ ರೊಟ್ಟಿ ಕಥೆ ಒಂದು ಉತ್ತಮ ಉದಾಹರಣೆಯಾಗಿದೆ. ಶಾಂತಿನಾಥ ದೇಸಾಯಿಯವರು 'ನಾನಲ್ಲ'ದ ವಿಮರ್ಶೆಯಲ್ಲಿ ಇಂಥ ಕ್ಷಣಗಳನ್ನು "ಅಸ್ತಿತ್ವದ ಜೀವಂತ ಕ್ಷಣ"ಗಳೆಂದು ಗುರುತಿಸಿ ಕಥೆಯ ಶ್ರೇಷ್ಠತೆ ಇರುವುದು ಈ ಕ್ಷಣಗಳ ಗ್ರಹಿಕೆಯಲ್ಲಿ ಎಂದಿದ್ದಾರೆ.

ರೊಟ್ಟಿ ಕಸಿದುಕೊಂಡ ತಕ್ಷಣ 'ಕಳ್ಳ ಕಳ್ಳ' ಎಂದು ಚೀರಿಕೊಂಡರೂ ಯಾರೂ ಅವಳನ್ನು ಗಮನಿಸುವುದಿಲ್ಲ. ಪಟ್ಟಣದ ಸಂಸ್ಕೃತಿ ವ್ಯವಸ್ಥೆಯನ್ನು ಇಲ್ಲಿ ಕಾಣಬಹುದು. ನಂತರ ಆಕೆಯ ಚೀರಾಟ ಹೆಚ್ಚಾದಾಗ ಎಲ್ಲರೂ ಬಂದು ಗುಂಪು ಸೇರುವರು. ಆ ಗುಂಪಿನಲ್ಲಿ ತನ್ನ ಪರ ಯಾರೂ ಇಲ್ಲ. ಆಗ ಆಕೆಯಲ್ಲಿ ಅನಾಥಪ್ರಜ್ಞೆ ಕಾಡುತ್ತದೆ. ಅಸಹಾಯಕತೆ, ಕೋಪಗಳ ನಡುವೆ "ಕೇಳಿದ್ದರೆ ನಾನೇ ಕೊಡ್ತಿದ್ದೆ" ಎಂದು ಹೇಳಲು ಪ್ರಯತ್ನಿಸಿದಾಗ, "ಕೇಳಿದ್ರೆ ಕೊಡ್ತಿದ್ದೆಯಾ"[೩೦] ಎಂದು ನೆರೆದವರಲ್ಲೊಬ್ಬ ಅವಳನ್ನು ಮೂದಲಿಸುತ್ತಾನೆ. ಜನರ ದಾಳಿಗಳಿಂದ ಕಂಗೆಟ್ಟ ಅವಳು "ಥೂ ನಾಯಿಗಳಾ" ಎಂದು ಅವರನ್ನು ಬೈಯುತ್ತಾಳೆ. ಅವಳಿಗೆ ಅವಮಾನದಲ್ಲಿ ಬೆತ್ತಲೆ ನಿಂತ ಅನುಭವವಾಗುತ್ತದೆ.

ಈ ಮಧ್ಯೆ 'ರಾಹು ಕಳೆ'ಯ ಪೊಲೀಸನೊಬ್ಬನು ಅವಳ ರಕ್ಷಣೆಗೆಂದು ಬರುತ್ತಾನೆ. ರೊಟ್ಟಿ ಕಸಿದು ತಿಂದ ವ್ಯಕ್ತಿಗೆ ಲಾಠಿ/ಏಟು ಬಿದ್ದು ಹಣೆಯಲ್ಲಿ ರಕ್ತ ಸೋರತೊಡಗುತ್ತದೆ. ಮಾನವೀಯ ಅನುಕಂಪದಲ್ಲಿ ಕರಗಿ ಅವಳು "ಬೇಡಿ, ಯಾರನ್ನು ಹೊಡೆಯಬೇಡಿ" ಎಂದು

---

[೨೯] ಪಿ. ಲಂಕೇಶ್‌ರವರ ಆಯ್ದ ಕಥೆಗಳು, ಲಂಕೇಶ್, ಪಿ., ಅಕ್ಷರ ಪ್ರಕಾಶನ, ಸಾಗರ, ೨೦೦೬, ಪು.೨೬–೩೨.

[೩೦] ಅದೇ, ಪು.೨೬–೩೨.

ಪೊಲೀಸರನ್ನು ಬೇಡಿಕೊಳ್ಳುತ್ತಾಳೆ. ಪರಿಸ್ಥಿತಿಯನ್ನು ನಿಯಂತ್ರಿಸುವುದಕ್ಕೆ ರಿಸರ್ವ್ ಪಡೆಯವರು ಆಗಮಿಸುತ್ತಾರೆ. ಪೊಲೀಸರ ಪಹರೆಯಲ್ಲಿ ಅವಳು ರಾಜಕುಮಾರಿಯಂತೆ ವ್ಯಾನ್ ಸೇರುತ್ತಾಳೆ. "ಬನ್ನೀಮ್ಮ, ನಿಮ್ಮ ಮನೆಗೆ ಕಳುಹಿಸುತ್ತೇವೆ" ಪೊಲೀಸ್‌ನೊಬ್ಬ ಅವಳಿಗೆ ಭರವಸೆ ನೀಡುತ್ತಾನೆ. ಅವಳಿಗೆ ಮತ್ತೆ ಜನರೊಡನೆ– ಅವರು ತನ್ನವರಲ್ಲದಿದ್ದರೂ ಒಂದಾಗುವ ಆಸೆ. "ಅಲ್ಲಿಂದ ಓಡಿ ಹೋಗಿ ಗುಂಪಾಗಿ ದೂರದಲ್ಲಿದ್ದ ಜನರಲ್ಲಿ ಸೇರಿಕೊಳ್ಳಬೇಕೆಂದು ಆಕೆಗೆ ಆಸೆಯಾಯಿತು. ಅವರಿಂದ ಹೊಡೆತ ತಿನ್ನಬೇಕು ಅನ್ನಿಸಿತು. ಅವರೊಂದಿಗೆ ಕೋಪ ತೋರಬೇಕೆನ್ನಿಸಿತು."[೩೧]

ಅವಳ ಈ ಭಾವನೆಗಳ ಹಿಂದೆ ಸೆಂಟಿಮೆಂಟಲ್ ಅಂಶಗಳು ಕೆಲಸ ಮಾಡಿವೆ. ಹಳ್ಳಿಯ ಹೆಣ್ಣಿನ ಮುಗ್ಧ ಭಾವನೆಗಳು, ನಿಷ್ಕಲ್ಮಷವಾದ ನಡವಳಿಕೆಗಳು ಈ ಚಿತ್ರಣದಲ್ಲಿ ಮಡುಗಟ್ಟಿ ನಿಂತಿವೆ ಎನ್ನಬಹುದು. ಇದೆಲ್ಲದರ ನಡುವೆ ಅವಳ ಮನಸ್ಸಿನಲ್ಲಿ ಕೊನೆಗೆ ಉಳಿದುಕೊಳ್ಳುವುದು ತಾನು ಕಂಡ ವ್ಯಕ್ತಿಯ ಚಿತ್ರ.

"ಕಣ್ಣು ಮುಚ್ಚಿದೊಡನೆ ಆತ ಪ್ರತ್ಯಕ್ಷ ಹಸಿರು ಅಂಗಿ, ತೊಡೆ ಮುಚ್ಚಿದ ಪಂಚೆ, ಹಸಿವು ತುಂಬಿದ ಕಣ್ಣು ರಕ್ತ. . ."[೩೨] ಲಂಕೇಶರ 'ಅವ್ವ' ಕವನದಲ್ಲಿದ್ದಂತೆ ಈ ಕಥೆಯಲ್ಲಿಯೂ ಹಸಿವಿನ ಅತಿರೇಕದ ಮಟ್ಟದ ಸಂಪೂರ್ಣ ದೃಷ್ಟಿಯ ನೋಟವಿದೆ ಎನ್ನಬಹುದು.

ಸ್ವತಃ ಲಂಕೇಶರೇ ಕಟ್ಟೀಮನಿಯವರ 'ಬೂಟ್ ಪಾಲಿಷ್' ಹಾಗೂ ಭಾರತೀಯವರ 'ಮೋಚಿ'ಗಳನ್ನು ವಿಶ್ಲೇಷಿಸುತ್ತಾ ಹೇಳಿದ ಹಾಗೆ ಈ ಕಥೆಗಳು ಗಟ್ಟಿ ತಿಳುವಳಿಕೆಯ ಅಭಾವದಿಂದಾಗಿ "ಮಾನವೀಯತೆಯ ಭಾವಾಡಂಬರಕ್ಕಿಳಿದವು" ಎಂಬ ಮಾತು ರೊಟ್ಟಿ ಕಥೆಗೆ ಅನ್ವಯಿಸುತ್ತದೆ. ಮಾನವೀಯ ಪ್ರಜ್ಞೆ ಹೇಗೆ ಮಹತ್ತುಂಗತೆಯ ಅಂಶವನ್ನು ತಲುಪುತ್ತದೆ ಎಂಬುದು ಆಕೆಯ ಭಾವನೆಗಳಿಂದ ತಿಳಿಯುತ್ತವೆ.

ಒಟ್ಟಾರೆ ಹಸಿವು, ಅಸಹಾಯಕತೆಗಳು ಮನುಷ್ಯನ ಜೀವನದಲ್ಲಿ ಹೇಗೆ ಮುಖ್ಯ ಪಾತ್ರ ವಹಿಸುತ್ತವೆ ಎಂಬುದನ್ನು ಆಕೆ ಮತ್ತು ಹಸಿವಿನಿಂದ ಕೂಡಿದ ವ್ಯಕ್ತಿಯ ಪಾತ್ರಗಳು

---

[೩೧] ಪಿ. ಲಂಕೇಶ್‌ರವರ ಆಯ್ದ ಕಥೆಗಳು, ಲಂಕೇಶ್, ಪಿ., ಅಕ್ಷರ ಪ್ರಕಾಶನ, ಸಾಗರ, ೨೦೦೬, ಪು.೨೬–೩೨.

[೩೨] ಅದೇ. ಪು.೨೬–೩೨.

ಅತ್ಯಂತ ಅಚ್ಚುಕಟ್ಟಾಗಿ ತೋರಿಸಿಕೊಟ್ಟಿವೆ. ಸಿಂಗಾರಪೇಟೆಯ ಸ್ಟೇಷನ್ನಿನ ಜನರ ಬೇಜವಾಬ್ದಾರಿಯತನ, ಮೂದಲಿಕೆಯ ವ್ಯಕ್ತಿತ್ವವನ್ನು ಈ ಕಥೆ ಬಿಚ್ಚಿಡುತ್ತದೆ.

**೩.೧.೮ 'ಸ್ಟೆಲ್ಲಾ' ಎಂಬ ಹುಡುಗಿಯ ಮೌನ ಸಂವೇದನೆ :**

ನರ್ಸ್ ಸ್ಟೆಲ್ಲಾಳ ಮೂಕ ಸಂವೇದನೆ ತನ್ನ ಗಂಡನಾದ ಸ್ಮಿಥ್ ಮತ್ತು ಪ್ರೇಮಿ ಫ್ರಾನ್ಸಿಸ್ ಬಗೆಗೆ. ತನ್ನ ಗಂಡನ ಸ್ವಭಾವವನ್ನು ಇಷ್ಟಪಡದೇ ಮೌನವಾಗಿ ಎಲ್ಲವನ್ನು ಸಹಿಸಿಕೊಳ್ಳುತ್ತಾ ಸಹನಾಮೂರ್ತಿಯಾಗಿರುತ್ತಾಳೆ. ಈ ಮಧ್ಯೆ ಫ್ರಾನ್ಸಿಸ್‌ನ ಪರಿಚಯವಾಗುತ್ತದೆ. ಈ ರೀತಿ ಜೀವನದ ಸಂದಿಗ್ಧ ಪರಿಸ್ಥಿತಿಯಲ್ಲಿ ಬದುಕುತ್ತಿದ್ದ ನರ್ಸ್ ಸ್ಟೆಲ್ಲಾ ಸುಬ್ಬಣ್ಣ ಎಂಬ ವಯಸ್ಸಾದ ರೋಗಿಗೆ ಇಷ್ಟವಾಗುತ್ತಾಳೆ. ಅಂದರೆ ಕಾಮುಕ ಜಗತ್ತಿನ ಬಲೆಗೆ ಆಟಿಕೆಯಾಗುತ್ತಾಳೆ. ಸುಬ್ಬಣ್ಣನಿಗೆ ಇವಳೆಂದರೆ ಪ್ರಾಣ.

"ನಸುಗೆಂಪು ಹುಡುಗಿ, ಚೊಕ್ಕವಾದ ನೀಳ ಬೆರಳಿನ, ಕೊಂಚ ಬಾಡಿದ ಯೌವ್ವನದ ಕೆನ್ನೆಯ, ಹುಲುಸು ಕೇಶರಾಶಿಯ ನರ್ಸ್. . . ಅವಳ ಮೈಯಿಂದ ತಾಯ್ತನದ ವಾಸನೆ ಬರುವುದಾಗಿ ಊಹಿಸಿದ್ದ. . . "ನಾನು ನನ್ನ ಮಗನ ಮನೆಗೆ ಹೋದರೆ ಬಂದು ನೋಡಿಕೊಳ್ತೀಯಾ ಅಮ್ಮಾ?"[೩೩] ಒಬ್ಬ ವಯಸ್ಸಾದ ರೋಗಿಯಾಗಿ ಮಲಗಿರುವ ಸುಬ್ಬಣ್ಣನ ಮನಸ್ಸಿನಲ್ಲಿ ಮೂಡುವ ಈ ಭಾವನೆಗಳು ಇಡೀ ಭಾವುಕ ಜಗತ್ತನ್ನು ತಲ್ಲಣಗೊಳಿಸುತ್ತವೆ.

ಆದರೆ ಸುಬ್ಬಣ್ಣನ ಮಗ ಸುರೇಶ ಕಾಲೇಜು ಉಪನ್ಯಾಸಕ ಸುರೇಶ ಮತ್ತು ಸೊಸೆ ಸಾವಿತ್ರಿ ಸುಬ್ಬಣ್ಣನ ಕಾಯಿಲೆಗೆ ಮನೆ ಮಠಗಳನ್ನು ಮಾರಿದ್ದರೂ 'ಪಾಲಿಗೆ ಬಂದದ್ದು ಪಂಚಾಮೃತ" ಎಂಬ ಬದುಕನ್ನು ಬದುಕಿದವರು. ತನ್ನ ತಂದೆಯನ್ನು ಯಾವುದೇ ರೀತಿಯ ಕೀಳು ಭಾವನೆಯಿಂದ ನೋಡಿದವರಲ್ಲ. ಆದರೆ ಸುಬ್ಬಣ್ಣ ತನ್ನ ಕೀಳರಿಮೆಯಿಂದ ಅವರನ್ನು ಅಶ್ಲೀಲವಾಗಿ ಬಯ್ಯುತ್ತಾನೆ. ಆದರೂ ಕೋಪ ಮಾಡಿಕೊಳ್ಳದೇ ಇವರು ಅಸಾಹಯಕರಾಗಿ ಕಾಣಿಸುತ್ತಾರೆ.

ಸುಬ್ಬಣ್ಣ ಸಾವಿನ ಭಯದಿಂದ ಸ್ಟೆಲ್ಲಾಳನ್ನು ಹತ್ತಿರಕ್ಕೆ ಕರೆಯುತ್ತಾನೆ. ಬಾಯಿಗೆ ಬಂದ ಹಾಗೆ ಹಲಬುತ್ತಾನೆ. ಆದರೆ ಸ್ಟೆಲ್ಲಾ "ಸುಮ್ಮನೆ ಮಲಗಿ" ಎಂದು ಹೇಳಿ ಫ್ರಾನ್ಸಿಸ್‌ನ ಬಳಿಗೆ

[೩೩] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೧೧೫–೧೧೬.

ಬರುತ್ತಾಳೆ. "ಫ್ರಾನ್ಸಿಸ್‌ನನ್ನು ಓಡಿ ಅಪ್ಪಿಕೊಂಡಳು" ತನ್ನ ಗಂಡ ಸ್ಮಿಥ್‌ನ ಆಗಮನದಿಂದ ಭಯಗ್ರಸ್ಥಳಾಗದೇ ಫ್ರಾನ್ಸಿಸ್‌ಗೆ ಪರಿಚಯಿಸಿ ಹೊಸತನವನ್ನು ತೋರಿಸುತ್ತಾಳೆ.

ಫ್ರಾನ್ಸಿಸ್ ಸ್ಮಿಥ್‌ನಿಗೆ ಬ್ಯಾಂಕಿನಿಂದ ಸ್ವಲ್ಪ ಸಾಲ ಕೊಡ್ಸಿ ಗ್ಯಾರೇಜ್ ಕೆಲಸ ಮಾಡಲು ಅನುವು ಮಾಡಿಕೊಡುತ್ತೇನೆಂದು ಹೇಳಿದ. ಅವನಿಗೆ ಸಂತೋಷವಾಯಿತು. ತನ್ನ ಹೆಂಡತಿ ಜೊತೆಗಿದ್ದರೂ ಏನೂ ಪ್ರತಿಭಟಿಸದ ಸ್ಮಿಥ್ ಜೀವನದಲ್ಲಿ ಸಾಕಷ್ಟು ನೊಂದಿದ್ದಾನೆ. ಇವರು ಮೂರು ಜನರ ನಡುವೆ ನಮಗೆ ಅಪಹೊಂದಾಣಿಕೆ ಎದ್ದು ಕಾಣುತ್ತದೆ.

ಸುಬ್ಬಣ್ಣ ಸತ್ತಾಗ ಸ್ಟೆಲ್ಲಾ ಮೌನವಾಗಿ ಹೆಣವನ್ನು ಸಾಗಿಸಿದಳು. ಅಂದರೆ ಜೀವನದಲ್ಲಿ ಸೋಲು-ಗೆಲುವು, ನೋವು-ನಲಿವು ಒಂದೇ ತರ ಸ್ವೀಕರಿಸುವ ಮನಸ್ಥಿತಿ ಸ್ಟೆಲಾಳಿಗೆ ಬಂದಿತ್ತು. ಇದು ಜೀವನ ಕಲಿಸಿದ ಪಾಠವಾಗಿತ್ತು. ವ್ಯಕ್ತಿಗಳು ತಮ್ಮ ಸ್ವಾರ್ಥಕ್ಕಾಗಿ ವಿಚಿತ್ರ ಹೊಂದಾಣಿಕೆಗಳನ್ನು ಒಪ್ಪಿಕೊಳ್ಳುವ ಕ್ರಿಯೆಯನ್ನು ಗಮನಿಸಿದಾಗ ಮಾನವೀಯ ಅವಸ್ಥೆಯ ಯಥಾರ್ಥವಾದ ಚಿತ್ರವನ್ನೇ ಲಂಕೇಶರು ನಮ್ಮೆದುರು ತೆರೆದಿಡುತ್ತಾರೆ.

**೩.೧.೯ ಹೊಸತು-ಹಳತು ಸಂಘರ್ಷದ ಹಾದಿಯಲ್ಲಿ ಶ್ಯಾಮಲ-ಮಲ್ಲಯ್ಯ :**

"ಕಲ್ಲು ಕರಗುವ ಸಮಯ" ಕತೆಯಲ್ಲಿ ಹೆಣ್ಣನ್ನು ಹೊಸ ರೀತಿಯಲ್ಲಿ ನೋಡುವ ಕ್ರಮ ಇದೆ. ಮುಖ್ಯವಾಗಿ ಪ್ರೇಮದ ಸಂದರ್ಭದಲ್ಲಿ ಇಲ್ಲಿನ ಹೆಣ್ಣು ಹೊಸ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾಳೆ. ಹೊಸ ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಕಥೆಯಲ್ಲಿ ನೋಡಬಹುದು. ಜೊತೆಗೆ ಕತೆಯಲ್ಲಿ ಅಡಗಿರುವ ವಾಸ್ತವದ ನೆಲೆಯಲ್ಲಿಯೇ, ಬದುಕಿನ ನಿಗೂಢತೆಯ ಶೋಧನೆ ಇದೆ. ಅದರಲ್ಲಿ ಅಡಗಿರುವ ಜೀವನಿಷ್ಟ ಮೌಲ್ಯಗಳನ್ನು ಗುರುತಿಸುತ್ತಾ ಹೋಗಬಹುದು.ಈ ನೆಲೆಯನ್ನು ಗಮನದಲ್ಲಿಟ್ಟುಕೊಂಡು ವಾಸ್ತವತೆ ಮತ್ತು ಜೀವನ ಪ್ರೀತಿಗೆ ಹೊಸ ಹಾದಿಯನ್ನು ತೋರಿಸಿದ ಶ್ಯಾಮಳ ಮತ್ತು ತಿಪ್ಪಣ್ಣರ ಪ್ರೀತಿಯನ್ನು ಇಲ್ಲಿ ವಿವರಿಸಲಾಗಿದೆ. ಶ್ಯಾಮಲಾಳ ಮುಗ್ಧತೆಯ ಮತ್ತು ಅಷ್ಟೇ ಚಾಕಚಕ್ಯತೆಯ ಮನಸ್ಸು ತಿಪ್ಪಣ್ಣನ ಸರಳತೆಗೆ ಸೋಲುವ ಮೂಲಕ ಪರಂಪರೆಯನ್ನು ಮೀರುವ ಸಾಹಸ ಮಾಡುತ್ತದೆ. ಕೆಳಜಾತಿ-ಮೇಲ್ಜಾತಿಯ ವಿವಾಹಗಳಿಗೆ ಸರ್ವರ ಸಮ್ಮತಿ ಇರುವುದಿಲ್ಲ. ಏಕೆಂದರೆ ಇದು ತಮ್ಮ ಮನೆತನದ ಮರ್ಯಾದೆಯ ಪ್ರಶ್ನೆ. ಈ ಕಥೆಯಲ್ಲಿ ಮೇಲ್ವರ್ಗಕ್ಕೆ ಸೇರಿದ ಶ್ಯಾಮಲಾಳ ತಂದೆ ಮಲ್ಲಯ್ಯ ಇವರಿಬ್ಬರ ಪ್ರೀತಿಯನ್ನು ವಿರೋಧಿಸುತ್ತಾನೆ. ಆದರೆ ಪ್ರೀತಿಯ ಮುಂದೆ

ತಣ್ಣಗಾಗುತ್ತಾನೆ. ಮಲ್ಲಯ್ಯನಲ್ಲೂ ಬದಲಾವಣೆಯ ಅಂಶಗಳು ಗೋಚರಿಸುತ್ತವೆ. ಮಲ್ಲಯ್ಯನ ಪಾತ್ರದ ಮೂಲಕ ಹೊಸ ಸಾಮಾಜಿಕ ನ್ಯಾಯದ ಪ್ರತಿಪಾದನೆಯನ್ನು ಕಥೆಯ ಕೊನೆಯಲ್ಲಿ ಕಾಣಬಹುದು.

ಈ ಕಥೆಯಲ್ಲಿ ಆಧುನಿಕತೆಯನ್ನು ಬಯಸುವ ತರಣ ಪಾತ್ರಗಳಾಗಿ ಶ್ಯಾಮಲ, ತಿಪ್ಪಣ್ಣ, ಕೃಷ್ಣೋಜಿ ಕಾಣಿಸಿಕೊಳ್ಳುತ್ತಾರೆ. ಹೊಸತನ್ನು ಅಳವಡಿಸಿಕೊಳ್ಳಲು ತುದಿಗಾಲಲ್ಲಿ ನಿಂತಿದ್ದಾರೆ. ಇದಕ್ಕೆ ಅಮೃತಾಂಬುದಿಯಲ್ಲಿ ಹಮ್ಮಿಕೊಂಡ "ಕಮ್ಮಟ" ಸಾಕ್ಷಿಯಾಗಿ ನಿಲ್ಲುತ್ತದೆ. ನಂತರ ಸಾಂಪ್ರದಾಯಿಕ ಮೌಲ್ಯಗಳ ಚೌಕಟ್ಟಿನಲ್ಲಿ ಬದುಕುತ್ತಿದ್ದರೂ ಸೂಕ್ಷ್ಮ ಮನಸ್ಥಿತಿ ತೋರುವ ವ್ಯಕ್ತಿಗಳಾಗಿ ಮಲ್ಲಯ್ಯ, ಗಿರಿಜಮ್ಮ ಕಾಣಿಸಿಕೊಳ್ಳುತ್ತಾರೆ. ಇವರು ಹಳತನ್ನು ಬಿಟ್ಟು ಬರಲಾರದೆ ತೊಳಲಾಡುತ್ತಾರೆ. ಈ ಎರಡು ಪ್ರಕಾರದ ವ್ಯಕ್ತಿಗಳು ಮುಖಾಮುಖಿಯಾದಾಗ ಉಂಟಾಗುವ ಹೊಸತು–ಹಳತುಗಳ ಸಂಘರ್ಷ ಕತೆಯ ಮುಖ್ಯಾಂಶ. ಈ ಸಂಘರ್ಷದಲ್ಲಿ ಹೊಸತು (ಆಧುನಿಕತೆ) ಯಶಸ್ಸನ್ನು ಸಾಧಿಸುವುದೇ ಕತೆಯ ರಹಸ್ಯ. ರಹಸ್ಯ ಬೇಧಿಸಲು ಕಥೆಯನ್ನು ವಿಮರ್ಶೆಗೆ ಒಳಪಡಿಸುವುದು ಅಗತ್ಯ.

ಕಥೆಯ ಮೊದಲಿಗೆ ಕಥೆಯಲ್ಲಿರುವ ಊರನ್ನು ಲೇಖಕರು ಈ ರೀತಿ ಪರಿಚಯಿಸುತ್ತಾರೆ. "ಅದೊಂದು ವೀರಾವೇಶದ, ಮಾರಾಮಾರಿಯ ಊರು. ಹೆಂಡತಿ ವ್ಯೆಭಿಚಾರ ಮಾಡಿದರೆ ಗಂಡನ ವಾದವಾಗಲೀ, ಗುಪ್ತ ವ್ಯಸನ ಪಡುವುದಾಗಲೀ ಆ ಊರಲ್ಲಿ ಇರಲಿಲ್ಲ. ವ್ಯೆಭಿಚಾರ ಮಾಡಿದವಳು ಮತ್ತು ಆಕೆಯ ಪ್ರಿಯಕರ ಇಬ್ಬರ ಕೊಲೆಯೂ ಒಂದೇ ಗಳಿಗೆಯಲ್ಲಿ ಆಗುತ್ತಿತ್ತು. ಕೊಟ್ಟಹಣ ಹಿಂದಿರುಗಿಸದೆ ಇದ್ದರೆ ಕೂಡ ಕಂಬಕ್ಕೆ ಕಟ್ಟಿ ಹೊಡೆದು ಜೀತ ಮಾಡಿಸುವುದು. ಸಂಪ್ರದಾಯ, ಕುಟುಂಬಗಳ ಜಿದ್ದು ಹಾಗೆಯೇ. ಎರಡರಲ್ಲಿ ಒಂದು ದಫನ್ ಆದಂತೆಯೇ, ಪಂಚಾಯಿತಿಗಳೆಂದರೆ ತಪ್ಪು ಮಾಡಿದವರನ್ನು ಬೆಂಕಿಗೆ ಇಕ್ಕುವ ಸಂದರ್ಭಗಳು ಅಮೃತಾಂಬುದಿ ಎಂಬ ಇಂತಹ ಊರನ್ನು ಉಳಿಸಿಕೊಂಡಿರುವವರು ಮಲ್ಲಯ್ಯನಂತಹವರು."[೩೪]

ಇಂತಹ ವಾತಾವರಣದಲ್ಲಿ ಮಲ್ಲಯ್ಯನ ಮಗಳಾಗಿ ಹುಟ್ಟಿ ಬೆಳೆದ ಶ್ಯಾಮಲ ಆ ಊರಿನಂತೆಯೇ ನೇರ ನಡೆನುಡಿಯ ಸ್ವಭಾವದವಳು. ಮೂಲತಃ ಪ್ರಗತಿಪರ ಯೋಚನೆಗಳನ್ನು ಈಕೆ ತಮ್ಮ ಊರಿನಲ್ಲಿ ನಡೆದ ಒಂದು 'ಕಮ್ಮಟ'ದ ಸಹಾಯದಿಂದ ತನ್ನ

---

[೩೪] ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೧೦೫–೧೧೬.

ಬದುಕಿನ ವಿಧಾನವನ್ನು ನಿರ್ಧರಿಸಿಕೊಳ್ಳುವಳು. ಅದೆಂದರೆ ಜಾತಿ, ಧರ್ಮ, ಮತಗಳನ್ನು ಮೀರಿ ಸ್ನೇಹಮಯೀ ವ್ಯಕ್ತಿಯೊಬ್ಬನನ್ನು ಪ್ರೀತಿಸುವುದು. ತನ್ನ ಛಲ, ದಿಟ್ಟತನದಿಂದ ಪ್ರೀತಿಸಿದವನನ್ನು ದಕ್ಕಿಸಿಕೊಳ್ಳುವುದು. ಆದರೆ ಈ ಮಧ್ಯೆ ಶ್ಯಾಮಲಾಳ ಪ್ರೇಮವನ್ನು ಮೌನವಾಗಿಯೇ ಸ್ವೀಕರಿಸುವ ತಿಪ್ಪಣ್ಣ ಮಲ್ಲಯ್ಯನನ್ನು ಎದುರಿಸುವುದು ವಿಚಿತ್ರವಾಗಿದೆ.

ಶ್ಯಾಮಲ ತಿಪ್ಪಣ್ಣರ ಪ್ರೇಮದ ವಿಷಯ ಕಿವಿಗೆ ಬಿದ್ದೊಡನೆ ಮಲ್ಲಯ್ಯ ರಕ್ಕಸನಂತೆ ಸಿಟ್ಟುಗೊಂಡಿದ್ದ. ಇಲ್ಲಿ ಸಾಂಪ್ರದಾಯಿಕ ಮನಸ್ಸು ಕೆಲಸ ಮಾಡಿದೆ. ಅವನಪ್ಪ ಮತ್ತು ಅಜ್ಜ ಇದನ್ನು ಸಹಿಸಿರಲಿಲ್ಲ. ಮನೆ ವ್ಯಾಜ್ಯದಲ್ಲಿ ಇಬ್ಬರು ಕೊಲೆಯಾಗಿದ್ದರೆ, ಇಂತಹ ಪ್ರೇಮ ಪ್ರಕರಣಗಳಲ್ಲಿ ಹಲವು ಖೂನಿಗಳೇ ಆಗಿದ್ದವು. ಶ್ಯಾಮಲ ಊರಲ್ಲಿ ಕತೆಯಾಗಿದ್ದಳು. ನಂಟರಿಗೂ ಗೊತ್ತಾಗಿತ್ತು. ಇದು ಕೇವಲ ಜಾತಿಯ ಪ್ರಶ್ನೆಯಲ್ಲ. ಬೇಡರ ಹುಡುಗನೊಬ್ಬ ಲಿಂಗಾಯಿತರ ಮನೆಯಲ್ಲಿ ಉಣ್ಣುವ, ಮಲಗುವ ಪ್ರಶ್ನೆ, ಊರಿಗೆ ಗೈರತ್ತು ಸ್ವಾಭಿಮಾನದ ಪ್ರಶ್ನೆ, ಊರಿನಲ್ಲಿ ಸಮಸ್ಯೆಯನ್ನು ಬಗೆಹರಿಸುವ ಶೈಲಿಯ ಪ್ರಶ್ನೆ, ಇಷ್ಟೆಲ್ಲಾ ಜಿಜ್ಞಾಸೆಗಳ ನಡುವೆಯೂ ಶ್ಯಾಮಲ ಮತ್ತು ತಿಪ್ಪಣ್ಣನ ಪ್ರೀತಿ ನಿರಾಂತಂಕವಾಗಿ ಸಾಗಿತ್ತು. ಕತೆಯಲ್ಲಿ ವ್ಯಕ್ತವಾಗಿರುವ ಈ ಸಂದರ್ಭಗಳು ಹೊಸತು-ಹಳತುಗಳ ಸಂಘರ್ಷವನ್ನು ತೋರಿಸುತ್ತವೆ. ಮಲ್ಲಯ್ಯ ಮಗಳ ಪ್ರೀತಿಯನ್ನು ಬಹಳ ಸೂಕ್ಷ್ಮವಾಗಿ ವಿರೋಧಿಸುತ್ತಾನೆ. ಅಷ್ಟೇ ಸಹಜವಾಗಿ ಶ್ಯಾಮಲ ತಿಪ್ಪಣ್ಣರ ಪ್ರೀತಿ ನಿರ್ಭಯವಾಗಿ ಸಾಗುತ್ತದೆ. ಇವರಿಬ್ಬರನ್ನು ಬೇರೆ ಮಾಡಲು ಮಲ್ಲಯ್ಯ ದೌರ್ಜನ್ಯವನ್ನು ಕೈಗೊಳ್ಳದೆ ಬಹಳ ತೀಕ್ಷ್ಣವಾಗಿ ಇವರಿಬ್ಬರ ಪ್ರೀತಿಗೆ ವಿರೋಧ ವ್ಯಕ್ತಪಡಿಸುತ್ತಾನೆ.

'ಮುಸ್ಸಂಜೆಯ ಕಥಾ ಪ್ರಸಂಗದ' ಸಾವಂತ್ರಿ-ಬ್ಯಾಡರ ಮಂಜ ಇವರಿಬ್ಬರ ಪ್ರೀತಿಯನ್ನು ಇಲ್ಲಿ ನೆನಪಿಸಿಕೊಳ್ಳುವುದು ಸಮಂಜಸ ಎಂಬುದು ನನ್ನ ಅನಿಸಿಕೆ. ಇವರಿಬ್ಬರ ಪ್ರೀತಿಗೆ ಸಾವಂತ್ರಿಯ ತಂದೆ ವಿರೋಧಿಸಿದಂತೆ ಶ್ಯಾಮಲ ಮತ್ತು ತಿಪ್ಪಣ್ಣರ ಪ್ರೀತಿಗೆ ಶ್ಯಾಮಲಳ ತಂದೆ ಮಲ್ಲಯ್ಯನವರು ವಿರೋಧಿಯಾಗಿ ಕಾಣಿಸುತ್ತಾರೆ. ಈ ಎರಡು ಕೃತಿಗಳಲ್ಲೂ ಪ್ರೀತಿಗೆ ವಿರೋಧ ವ್ಯಕ್ತವಾದರೂ ಕೊನೆಗೆ ಪ್ರೀತಿಗೆ ಜಯತಂದುಕೊಡುವ ತರುಣ ಪಾತ್ರಗಳು ಆಧುನಿಕತೆಯನ್ನು ಬಿಂಬಿಸುವಲ್ಲಿ ಯಶಸ್ವಿಯಾಗಿವೆ. ಹಾಗೆಯೇ ಸಾಂಪ್ರದಾಯಕ ಮೌಲ್ಯಗಳ ಚೌಕಟ್ಟಿನಲ್ಲಿ ಬದುಕುತ್ತಿದ್ದರೂ, ಸೂಕ್ಷ್ಮ ಮನಸ್ಸಿನ ವ್ಯಕ್ತಿಯಾದ ಮಲ್ಲಯ್ಯ ತನ್ನ ಮಾನಕ್ಕೆ ದಕ್ಕೆ ತಂದ ತಿಪ್ಪಣ್ಣನನ್ನು ಮುಗಿಸುವ ಒಂದೇ ಉದ್ದೇಶದಿಂದ ಹೊರಡುತ್ತಾನೆ. ತಿಪ್ಪಣ್ಣನ ಸರಳತೆ, ದೀನತೆ, ಸಹಜತೆ ಮಲ್ಲಯ್ಯನಲ್ಲಿ ಆಶ್ಚರ್ಯವನ್ನುಂಟುಮಾಡುತ್ತದೆ. ತನ್ನ ಕಲ್ಪನೆಗೆ ತದ್ವಿರುದ್ಧವಾಗಿದ್ದ ತಿಪ್ಪಣ್ಣನ ಎದುರು

ಮಲ್ಲಯ್ಯನ ಆರ್ಭಟವೆಲ್ಲ ಕರಗಿ ಕುಸಿಯುವಂತಾಗುತ್ತದೆ. ಅಲ್ಲದೇ ಮಲ್ಲಯ್ಯನಲ್ಲಿ ಬದುಕಿನ ಬಗ್ಗೆ ಮರುಚಿಂತನೆ ಪ್ರಾರಂಭವಾಗಿ ಸಮಸ್ಯೆಗಳಿಗೆ ಬೇರೆ ಬೇರೆ ರೀತಿಯ ಪರಿಹಾರ ಹುಡುಕುವುದು ವಿಚಿತ್ರವಾಗಿದೆ. ಕ್ರಮೇಣ ಮಲ್ಲಯ್ಯ ಮೃದುವಾಗಿ ತನ್ನಲ್ಲೇ ತಾನು ಹುದುಗಿ ಹೋಗುತ್ತಾನೆ.

ಕತೆಯ ಕೊನೆಗೆ ಶ್ಯಾಮಲ–ತಿಪ್ಪಣ್ಣ ವಿವಾಹವಾಗಿ ಜೀವನ ನಡೆಸುವ ಪ್ರಸಂಗವು ಆಧುನಿಕತೆಯನ್ನು ಬಯಸುವ ತರುಣ ಪಾತ್ರಗಳು ಹೊಸತನದ ದೃಷ್ಟಿಕೋನವನ್ನು ಸೂಚಿಸುತ್ತದೆ. ಹೊಸ ಸಮಾಜಕ್ಕೆ ಹಂಬಲಿಸುವ ವ್ಯಕ್ತಿಯ ಯಶಸ್ಸನ್ನು ಹೇಳುತ್ತಿವೆ.

**೩.೧.೧೦ ರೋಮ್ಯಾಂಟಿಕ್ ಪಾತ್ರಗಳಾಗಿ ಗೌರಿ, ಶಿವರುದ್ರ :**

"ಕೆರೆಯ ನೀರನು ಕೆರೆಗೆ ಚೆಲ್ಲಿ" ಎಂಬ ರೋಮ್ಯಾಂಟಿಕ್ ಕಥೆಯಲ್ಲಿ ಎರಡು ಬಗೆಯ ವ್ಯಕ್ತಿಗಳು ಕಂಡುಬರುತ್ತಾರೆ. ಒಂದು ಆಧುನಿಕತೆಯನ್ನು ಬಯಸುವ ರೋಮ್ಯಾಂಟಿಕ್ ವ್ಯಕ್ತಿಗಳಾಗಿ ಗೌರಿ, ಶಿವರುದ್ರ, ಪರಮೇಶಿ, ಎರಡನೆ ಬಗೆ ಸಾಂಪ್ರದಾಯಿಕ ಮೌಲ್ಯಗಳ ನೆಲೆಯಲ್ಲಿ ಬದುಕನ್ನು ಅನಿವಾರ್ಯವೆಂಬಂತೆ ಸ್ವೀಕರಿಸುವ ಗೌರಿಯ ಅಜ್ಜಿ, ಗೌಡ, ಮಾಸ್ತರು. ಇವೆರಡೂ ಬಗೆಯ ಪಾತ್ರಗಳ ಮುಖಾಮುಖಿ ಈ ಕತೆಯಲ್ಲಿದೆ. "ಕೆರೆಯ ನೀರನು ಕೆರೆಗೆ ಚೆಲ್ಲಿ" ಕತೆಯಲ್ಲಿ ಪಟ್ಟಣದ ಮೌಲ್ಯಗಳ ಬಗ್ಗೆ ಒಂದು ರೀತಿಯ ಸೆಂಟಿಮೆಂಟಲ್ ಮನೋವೃತ್ತಿ ಎದ್ದು ತೋರುತ್ತದೆ" ಎಂದು ಶಾಂತಿನಾಥ ದೇಸಾಯಿ ಅಭಿಪ್ರಾಯಪಟ್ಟಿದ್ದಾರೆ."[೩೫] ಈ ಅಭಿಪ್ರಾಯವನ್ನು ಒಪ್ಪಿಕೊಳ್ಳಬಹುದು. ಗೌರಿ, ಶಿವರುದ್ರ ಗ್ರಾಮೀಣ ಪರಿಸರದಲ್ಲಿ ಬದುಕುತ್ತಿದ್ದರು.

**ಬೆಳ್ಳಕ್ಕಿ ಬೆಳ್ಳಕ್ಕಿ ಬಾ. ಬಾ. ಬಾ.**
**ಕೂಗುವ, ನಗುವ ಕಂದಮ್ಮಗಳು.**
**ಬೆಳ್ಳಕ್ಕಿ, ಬೆಳ್ಳಕ್ಕಿ, ನನ್ನುಂಗ್ರ ಕೊಡ್ತೇನಿ ನಿನ್ನುಂಗ್ರ ಕೋ. . . . ಡು"**
**ಬೆಳ್ಳಕ್ಕಿ ಉಂಗ್ರ ಕೊಡು. . . . ನಂಗೂಂದುಂಗ್ರ. . . . ಉಂಗ್ರ".[೩೬]**

---

[೩೫] 'ನವ್ಯ ಸಾಹಿತ್ಯದರ್ಶನ', ಶಾಂತಿನಾಥ ದೇಸಾಯಿ, ಪರಿಸರ ಸಾಹಿತ್ಯ, ಪು.೯೮, ಪ್ರಕಾಶನ, ಶಿವಮೊಗ್ಗ, ೧೯೯೦.

[೩೬] ಕೆರೆಯ ನೀರನು ಕೆರೆಗೆ ಚೆಲ್ಲಿ ಮತ್ತು ಇತರ ಕಥೆಗಳು, ಪಿ. ಲಂಕೇಶ್, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೬೭.

ಎಂದು ಹಾಡಿಕೊಂಡು ಪ್ರಕೃತಿಯ ಮಡಿಲಿನಲ್ಲಿ ಮುಗ್ಧತನದಿಂದ ಬೆಳೆಯುತ್ತಿದ್ದ ಗೌರಿ ತನ್ನ ಮಾವ ಪರಮೇಶ ಪಟ್ಟಣದಿಂದ ಬರುವ ಸುದ್ಧಿ ಕೇಳಿ ಒಂದು ರೀತಿ ಕಂಪಿಸುತ್ತಾಳೆ. ಪರಮೇಶನನ್ನು ಹೇಗೆ ಮಾತನಾಡಿಸಬೇಕೆಂಬ ಚಿಂತೆ ಬಾಧಿಸತೊಡಗುತ್ತದೆ. ರೈಲಿನ ಶಬ್ಧ ಕೇಳಿಸುತ್ತಿದ್ದಂತೆ ಪರಮೇಶನನ್ನು ಫೇಸ್ ಮಾಡಲು ಸಜ್ಜಾಗುತ್ತಾಳೆ. ಈ ಎಲ್ಲಾ ತುಮುಲಗಳು ಪಟ್ಟಣ ಸಂಸ್ಕೃತಿಯ ಬಗ್ಗೆ ಗೌರಿಗಿದ್ದ ನಿಗೂಢತೆಯೆ ಕಾರಣವಾಗಿತ್ತು. ಪರಮೇಶಿಯನ್ನು ಮದುವೆಯಾಗಿ ಪಟ್ಟಣಕ್ಕೆ ಹೋಗಿ ಮನೆ ಮಾಡಿಕೊಂಡು ಇರುವಂತೆ ಹಗಲುಗನಸು ಕಾಣುತ್ತಾಳೆ. ಆಧುನಿಕತೆಯ ಕಾವು ಗೌರಿ ಮತ್ತು ಶಿವರುದ್ರ ಇಬ್ಬರಲ್ಲೂ ಚಳಿ ಬಿಡಿಸಿದೆ. "ಈಪಟ್ಟಂದ ಏನು ಬಿಡವ್ವ ನೀನು ಪ್ಯಾಟಿಗೆ ಹೋಗಿ ಬಿಟ್ತೀಯಾ; ನಮ್ಮ ಗುರುತು ಹಿಡಿಯಾಕ್ಕಿಲ್ಲ"[೩೭] ಎಂಬ ಶಿವರುದ್ರನ ಮಾತು ಪಟ್ಟಣದ ಬಗ್ಗೆ ಅವನಿಗಿದ್ದ ಆಸೆಯನ್ನು ತೋರಿಸುತ್ತದೆ.

ಪದವಿ ಪಡೆದ ಪರಮೇಶಿ ಹಳ್ಳಿಗೆ ಬಂದಾಗ ಆಡುವ ಇಂಗ್ಲೀಷ್ ಮಾತುಗಳು, ಅವನ ಜೀಪ್ ರೋಮಾನ್ಸ್ ತೀರ ಕೃತ್ರಿಮವಾಗಿ ಕತೆಯಲ್ಲಿ ಬರುತ್ತದೆ.

"ಅರಸೀ ಕೆರೆಯಲ್ಲಿ ಕಾಫಿ ಕುಡಿದೋನು ಮತ್ತೆಲ್ಲೂ ಇಳಿಯೊಕೇ ಆಗ್ಲಿಲ್ಲ, ಸೆಕೆಂಡ್ ಕ್ಲಾಸ್‌ನಲ್ಲಿ ಜನರ ರಷ್, ಡರ್ಟಿ ಟ್ರೈನ್ಸ್" ಎಂದಾಗ ಒಂದೇ ವರ್ಷದ ಹಿಂದೆ ಅಚ್ಚ ಕನ್ನಡದಲ್ಲಿ ಮಾತಾಡುತ್ತಿದ್ದ ಮಾವ ಸಾಹೇಬನಾಗಿದ್ದಾನೆ ಎಂದು ಗೌರಿ ವಿಸ್ಮಯದಿಂದ ಕುಕ್ಕಡಿಯಾದಳು."[೩೮]

ಅಜ್ಜ, ಗೌಡ ಮಾಸ್ತರು ಈ ಮೂರು ಜನರು ಸಾಂಪ್ರದಾಯಿಕ ಹಳ್ಳಿಯ ಪಾತ್ರಗಳು ಅವನ ಬಾಯಿ ನೋಡುತ್ತಿದ್ದರು. ಆದರೆ ಆ ರೀತಿ ತಾವು ಆಗಬೇಕು ಎಂಬ ಹಂಬಲ ಅವರದಾಗಿರಲಿಲ್ಲ. ಗೌರಿ ಮಾತ್ರ ತಾನು ಮದುವೆಯಾಗಿ ಅವನ ಜೊತೆ ಹೋಗ ಬೇಕಾಗಿರುವವಳು. ಅವನೇನಾದರು ಇಂಗ್ಲೀಷ್‌ನಲ್ಲಿ ಮಾತನಾಡಿದರೆ ಅರ್ಥವಾಗದಿದ್ದರೆ ಏನು ಗತಿ ಎಂದು ಭಯಗ್ರಸ್ಥಳಾಗುತ್ತಾಳೆ.

---

[೩೭] ಕೆರೆಯ ನೀರನು ಕೆರೆಗೆ ಚೆಲ್ಲಿ ಮತ್ತು ಇತರ ಕಥೆಗಳು, ಪಿ. ಲಂಕೇಶ್, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೬೭.

[೩೮] ಅದೇ, ಪು.೬೭.

"ತಾನು ಓದಿದ್ದರೆ ಚನ್ನಿತ್ತು - ಆದರೆ ಅಜ್ಜಿ ಶಾಲೆಗೆ ಹೋಗು ಅಂದಾಗಲೆಲ್ಲ ಶಿವರುದ್ರನ ಜೊತೆಗೆ ಗದ್ದೆಗೆ ಹೋಗಿ ಶುಂಡಿ ನಡುತ್ತಿದ್ದುದು ನೆನಪಾಗಿ".[೩೯] ತನ್ನ ಬುದ್ದಿಗೆ ಚಿಮಾರಿ ಹಾಕಿಕೊಳ್ಳುತ್ತಾಳೆ. ತಾನು ಸಹ ಪರಮೇಶಿಯ ಹಾಗೆ ಮಾತನಾಡಬೇಕು. ತನ್ನ ಮಾವನ ಹಾಗೆ ಶುಭ್ರವಾಗಿರಬೇಕು ಎಂದು ಮರಗುತ್ತಾಳೆ. ಪರಮೇಶಿ ತನ್ನ ಕೈಯಲ್ಲಿ ಹಿಡಿದುಕೊಂಡಿದ್ದ ಪುಟ್ಟ ಚೀಲ ತೆಗೆದು "ಏನು ಹೇಳು?"ಎಂದಾಗ ಹೇಳಲಿಕ್ಕಾಗದೇ ಸತ್ತು ಹೋಗಬೇಕೆನ್ನುವಷ್ಟು ನಾಚಿಕೆಯಾಗುತ್ತದೆ. ತನ್ನ ಮಾವ "ವ್ಯಾನಿಟಿಬ್ಯಾಗ್" ಎಂದು ಗಟ್ಟಿಯಾಗಿ ನಗೆಯಾಡಿದಾಗ ಮಾವನ ಕೆನ್ನೆಗೆರಡುಕೊಡಬೇಕೆನಿಸುತ್ತದೆ. ಗ್ರಾಮೀಣ ನೆಲೆಯಲ್ಲಿ ವಾಸವಾಗಿದ್ದ ಗೌರಿಗೆ ಇವೆಲ್ಲ ಅಂಶಗಳು ತಿಳಿಯದಿದ್ದರೆ ದಡ್ಡರು ಎಂಬ ಭಾವನೆ ಬೇರೂರಿದ್ದೆ ಅವಳ ಮುಜುಗರಕ್ಕೆ ಮೂಲ ಕಾರಣ.

ಗೌರಿ ದಿನದಿಂದ ದಿನಕ್ಕೆ ತನ್ನ ಮಾವ ಪರಮೇಶಿಯನ್ನು ಅನುಸರಿಸಲು ಮುಂದಾಗುತ್ತಾಳೆ. ಅವಳು ಕಾಣುವ ಹಗಲುಗನಸುಗಳು ಹೊಸ ಸಮಾಜದ ಸೃಷ್ಟಿಯ ದ್ಯೋತಕದಂತಿವೆ. "ತಣ್ಣನೆ ಗಾಳಿ ಬೀಸಿ ಬಂದು ದೇಹದ ರಂಧ್ರ ರಂಧ್ರಕ್ಕೆ ಹೊಡೆದ ಹಾಗಾಗಿ ಇದೇಕೆ ಹೀಗಾಗುತ್ತಿದೆ ಎಂದು ಕಣ್ಣು ಬಿಟ್ಟಾಗ ಬೆಳ್ಳನೆಯ ಕುದುರೆಯ ಮೇಲೆ ಕೂತಿರುವುದೂ ಗೊತ್ತಾಗುತ್ತಲೇ ಧೈರ್ಯ ಸೊನ್ನೆಯಾಗಿ ಮಾಡಲೇನು ತೋಚದೆ ಹಿಡಿದುಕೊಳ್ಳಲು ಏನಾದರೂ ಇದೆಯೇ ಎಂದು ಎದುರಿಗೆ ಕೈಯೊಡ್ಡುತ್ತಾ ಕಣ್ಣೊರೆಸಿಕೊಳ್ಳುತ್ತಾ ಅಜ್ಜಿ ಸತ್ತೇ, ಅಜ್ಜಿ ಸತ್ತೇ. . ."[೪೦]

ಎಂಬ ಕನಸಿನಲ್ಲಿ ಪರಮೇಶಿಯನ್ನು ಎದುರಿಸುವಲ್ಲಿ ತಾನು ವಿಫುಲಳಾಗುವ ಬಗೆಯನ್ನು ಗೌರಿ ಮನಗಂಡಿರುವುದು ಸಾಬೀತಾಗಿದೆ. ಆಧುನಿಕ ಸಮಾಜ–ಸಾಂಪ್ರದಾಯಿಕ ಸಮಾಜಗಳು 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಯಲ್ಲಿ ನಗರ ಸಮಾಜ–ಗ್ರಾಮ ಸಮಾಜಗಳನ್ನು ಪ್ರತಿನಿಧಿಸುತ್ತವೆ. ವಿದ್ಯಾಭ್ಯಾಸ ಮಾಡಿಕೊಂಡು ನಾಜೂಕಿನಿಂದ ಕಾಣುವ ಪರಮೇಶಿ ನಗರ ಸಮಾಜವನ್ನು ಬಿಂಬಿಸಿದರೆ, ಒರಟುತನದಿಂದ ಹೊಲಗದ್ದೆಯಲ್ಲಿ ಕೆಲಸ ಮಾಡುವ ಗೌರಿ ಮತ್ತು ಶಿವರುದ್ರ ಗ್ರಾಮಸಮಾಜವನ್ನು ಪ್ರತಿನಿಧಿಸುತ್ತಾರೆ. ಗೌರಿ ಮತ್ತು ಶಿವರುದ್ರ ಪರಮೇಶಿಯನ್ನು ಅನುಸರಿಸುವುದು ಕಥೆಯಲ್ಲಿ ಪ್ರಧಾನ ಅಂಶ. ನಗರ ಸಂಸ್ಕೃತಿ

---

[೩೯] ಅದೇ, ಪು.೬೭.

[೪೦] ಕೆರೆಯ ನೀರನು ಕೆರೆಗೆ ಚೆಲ್ಲಿ ಮತ್ತು ಇತರ ಕಥೆಗಳು, ಪಿ. ಲಂಕೇಶ್, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭, ಪು.೬೮.

ಮೇಲು ಎಂಬ ಭಾವನೆ ಇವರಿಬ್ಬರ ಪಾತ್ರಗಳಿಂದ ಸಾಬೀತಾಗಿದೆ. ಹೀಗೆ ಲಂಕೇಶರ ಕಥೆಗಳಲ್ಲಿ ರೋಮ್ಯಾಂಟಿಸಂನ್ನು ಬಯಸುವ ತರುಣ ಪಾತ್ರಗಳಲ್ಲಿ ಗೌರಿ, ಶಿವರುದ್ರ ಮತ್ತು ಪರಮೇಶಿ ಮೇಲುಪಂಕ್ತಿಯಲ್ಲಿ ಕಂಡುಬರುತ್ತಾರೆ.

### ೩.೧.೧೧ ಮೇಲುವರ್ಗದ 'ಅಧಿಕಾರಿಗಳು' ಮತ್ತು ಕೆಳವರ್ಗದ 'ಕೆಲಸದವ'

ಬೆಂಗಳೂರಿನಂಥ ನಗರದಲ್ಲಿ ಸುಮಾರು ಮೂವತ್ತೈದು ವರ್ಷ ಆಫೀಸರ್ಸ್ ಆಗಿ ಕಾರ್ಯ ನಿರ್ವಹಿಸಿದ ಅಧಿಕಾರಿಗಳು ಮೇಲುವರ್ಗವನ್ನು ಪ್ರತಿನಿಧಿಸುತ್ತಾರೆ. ಕಥೆಯಲ್ಲಿ ಬರುವ 'ಕೆಲಸದವ' ಕೆಳವರ್ಗದ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ. ತಮ್ಮ ಸೂಚನೆಗಳನ್ನು ಶಿರಸಾವಹಿಸಿ ಪಾಲಿಸುವ ಜವಾನರನ್ನು ಇಟ್ಟುಕೊಂಡು ಐಶಾರಾಮದ ಜೀವನ ನಡೆಸಿದ ಅಧಿಕಾರಿಗಳು ಒಮ್ಮೆ ತಪ್ಪಿಸಿಕೊಳ್ಳುತ್ತಾರೆ. 

"ಹಿರಿಯ ಅಧಿಕಾರಿ ಮತ್ತು ಬರಿಯ ಅಧಿಕಾರಿ ನಿವೃತ್ತರಾದರು. ನಿವೃತ್ತರಾದ ದಿನ ತಮ್ಮ ತಮ್ಮ ಮನೆಗಳಿಗೆ ಹೋಗಿ ಪಟ್ಟಾಗಿ ಊಟ ಮಾಡಿ ಮಲಗಿದರು. ಬೆಳಿಗ್ಗೆ ಅವರಿಬ್ಬರಿಗೂ ಆಶ್ಚರ್ಯ ಕಾದಿತ್ತು. ಬರಿಯ ಅಧಿಕಾರಿ ಬೆಳಗ್ಗೆ ಎದ್ದು ಕಣ್ಣುಜ್ಜಿಕೊಂಡು ನೋಡುತ್ತಾನೆ. ನಿರ್ಜನ ಪ್ರದೇಶವೊಂದರಲ್ಲಿ ಹಿರಿಯ ಅಧಿಕಾರಿಯ ಪಕ್ಕದಲ್ಲಿ ಬಿದ್ದುಕೊಂಡು ಎದ್ದಿದ್ದಾನೆ!"[೪೧]

ನಿರ್ಜನ ಪ್ರದೇಶದಲ್ಲಿ ಕಣ್ಣುಬಿಡುವ ಈ ಇಬ್ಬರು ಅಧಿಕಾರಿಗಳಿಗೆ ಆಶ್ಚರ್ಯವಾಗುತ್ತದೆ. ಪಿಕ್‌ನಿಕ್ ಹೋಗಿದ್ದೆವೆಯೇ ಎಂಬ ಅನಿಸಿಕೆ ಹಿರಿಯ ಅಧಿಕಾರಿ ವ್ಯಕ್ತಪಡಿಸುತ್ತಾನೆ. "ಕಾಫಿ ಎಲ್ಲಿ?" ಎಂದು ಬರಿಯ ಅಧಿಕಾರಿಯನ್ನು ಕೇಳುತ್ತಾನೆ. ಈ ಎಲ್ಲಾ ಮಾತುಗಳು ಆಧುನಿಕ ಬದುಕಿನ ಜೀವನ ಕ್ರಮವನ್ನು ತೋರಿಸುತ್ತದೆ. ಆಧುನಿಕ ಬದುಕಿನ ಜೀವನವನ್ನು ಅನುಭವಿಸಿದ ಈ ಇಬ್ಬರು ಅಧಿಕಾರಿಗಳು ತಿಂಡಿಗೆ ಏನು ಮಾಡುವುದು, ಪೇಪರ್, ಪೆನ್ನು ಏನು ನಮ್ಮ ಬಳಿ ಇಲ್ಲವಲ್ಲ ಎಂಬ ತಳಮಳವನ್ನು ವ್ಯಕ್ತಪಡಿಸುತ್ತಾರೆ. ಕ್ರಮೇಣ ಆ ಸ್ಥಳಕ್ಕೆ ಹೊಂದಿಕೊಳ್ಳಲು ಆರಂಭಿಸುತ್ತಾರೆ.

---

[೪೧] ಪಿ. ಲಂಕೇಶ್, ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು, ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು–೨೦೦೭ (ಪು.೧೫೧–೧೬೦).

ಅಧಿಕಾರಿಗಳಿಗೆ ಒಬ್ಬ ಕೆಲಸದವನ ಪರಿಚಯವಾಗುತ್ತದೆ. ಆಗ ಅವನ ಕೈಯಿಂದ ಎಳನೀರು ತರಿಸುತ್ತಾರೆ. ಊಟ, ತಿಂಡಿಯನ್ನು ಮಾಡಿಸಿಕೊಂಡು ತಿನ್ನುತ್ತಾರೆ. ಇಲ್ಲಿ ನಗರ ಮತ್ತು ಗ್ರಾಮದ ಸಮತೋಲನ ವ್ಯಕ್ತವಾಗಿದೆ. ಈ ಸಂದರ್ಭದಲ್ಲಿ ಅಧಿಕಾರಿಗಳ ದರ್ಪ ಮತ್ತು ಕೆಲಸದವನ ಸ್ವಾಮಿನಿಷ್ಠೆ ಎದ್ದು ಕಾಣುತ್ತದೆ. ಅಧಿಕಾರಿಗಳ ಮತ್ತು ಕೆಲಸದವನ ನಡುವೆ ಕ್ರಮೇಣ ಬಾಂಧವ್ಯ ಬೆಳೆಯುತ್ತದೆ. ಬಾಂಧವ್ಯ ಬೆಳೆದು ಇವರಿಬ್ಬರಲ್ಲೂ ಸಹಕಾರ, ಸೌಹಾರ್ದ ಏರ್ಪಡುತ್ತದೆ. ಅಧಿಕಾರಿಗಳು ಎಷ್ಟು ದರ್ಪ ತೋರಿದರು ಕೆಲಸದವ ಮರುಮಾತನಾಡದೆ ಸುಮ್ಮನೆ ಇದ್ದುದರಿಂದ ಅಧಿಕಾರಿಗಳ ಮನಸ್ಸು ಕರಗುತ್ತದೆ.

ಮಾನವೀಯ ಮೌಲ್ಯಗಳ ಹಿನ್ನೆಲೆಯಲ್ಲಿ ಅಧಿಕಾರಿಗಳ ದರ್ಪ ಬದಲಾಗುತ್ತದೆ. ಎಷ್ಟೇ ಬೈದರೂ, ಹೀಯಾಳಿಸಿದರು ಕೆಲಸದವ ತನ್ನ ಸ್ವಾಮಿನಿಷ್ಠೆಯನ್ನು ಬಿಡುವುದಿಲ್ಲ ಇದು ಅಧಿಕಾರಿಗಳಿಗೆ ಕೆಲಸದವನ ಮೇಲೆ ಪ್ರೀತಿ ಹುಟ್ಟಲು ಕಾರಣವಾಯಿತು.

ಬೆಂಗಳೂರಿನಿಂದ ತಪ್ಪಿಸಿಕೊಂಡಿದ್ದ ಅಧಿಕಾರಿಗಳು ಸ್ವಲ್ಪ ಕಾಲದ ನಂತರ ತಮ್ಮ ಊರಿಗೆ ಸೇರುತ್ತಾರೆ. ಆಗ ಅವರು ಖುಷಿಯಿಂದ ಸಂತೋಷಿತರಾಗುವರು. ಕೆಲಸದವನನ್ನು ತಮ್ಮಲ್ಲಿಯೇ ಇರಿಸಿಕೊಳ್ಳುವರು.

ಒಟ್ಟಾರೆ ಗ್ರಾಮ ಮತ್ತು ನಗರದ ಸಮತೋಲನಕ್ಕೆ ಒಗ್ಗಿಕೊಳ್ಳುವ ವ್ಯಕ್ತಿಗಳನ್ನು ಇಲ್ಲಿ ಕಾಣುತ್ತೇವೆ. ಹಳ್ಳಿಯ ಜೀವನ ಮೊದಮೊದಲು ಕಷ್ಟವಾದರೂ ಕ್ರಮೇಣ ಒಗ್ಗಿಕೊಳ್ಳುತ್ತದೆ. ನಂತರ ನಗರಕ್ಕೆ ತೆರಳಿದಾಗ ಆ ಜೀವನ ಪ್ರಾರಂಭವಾಗುತ್ತದೆ. ಇವೆರಡು ಪ್ರದೇಶಗಳ ನಡುವಿನ ಒಗ್ಗಿಕೊಳ್ಳುವ ಸನ್ನಿವೇಶಕ್ಕೆ ಈ ಎರಡು ರೀತಿಯ ವಿಭಿನ್ನ ಪಾತ್ರಗಳು ಸಾಕ್ಷಿಯಾಗಿವೆ.

### ೩.೨ ಪರಂಪರೆ ಮತ್ತು ವ್ಯಕ್ತಿ :

ಲಂಕೇಶರ ಕಥೆಗಳು ವ್ಯಕ್ತಿಯ ಜೀವನವನ್ನು ಬದಲಾವಣೆ ಅಲೆಗೆ ಸಿಲುಕಿಸಿ ಸಮಗ್ರವಾಗಿ ನೋಡುವ ಗುಣಕ್ಕೆ ಹೆಚ್ಚು ಒತ್ತು ನೀಡಿವೆ. ಉದ್ವಿಗ್ನತೆ, ಆತಂಕಗಳಿಗೆ ಬದಲಾಗಿ ವಿಶ್ವಾಸ, ಮನಃಸ್ಥೈರ್ಯ ಮತ್ತು ವ್ಯಾಮೋಹದ ಗುಣಗಳು ಇಲ್ಲಿ ಪ್ರಧಾನವಾಗಿವೆ. ಇಂತಹ ಜಿಜ್ಞಾಸೆಗಳ ಹಿನ್ನೆಲೆಯಲ್ಲಿ ರಚಿತವಾದ ಕಥೆಗಳು ಹೊಸ ಬದಲಾವಣೆಯೊಂದಿಗೆ ಯಶಸ್ಸಿನ ಶೃಂಗಕ್ಕೇರಿ ಹೊಸ ಘಟ್ಟವನ್ನು ಮುಟ್ಟಿವೆ. ಈ ಬದಲಾವಣೆಯ ಹಿಂದೆ ಪರಂಪರೆ ಕೆಲಸ

ಮಾಡಿದೆ. ಪರಂಪರೆ ಮತ್ತು ವ್ಯಕ್ತಿಯ ಮುಖಾಮುಖಿಯಲ್ಲಿ ಕಥೆಗಳ ಗೆಲುವಿದೆ. ಮೇಲೆ ವಿವರಿಸಿದಂತೆ 'ವ್ಯಕ್ತಿ'ಯ ವಿವಿಧ ರೂಪಗಳು ಈ ಅಂಶವನ್ನು ಸಾಬೀತುಪಡಿಸಿವೆ.

ಲಂಕೇಶರ ಬಹುತೇಕ ಕಥೆಗಳು ವ್ಯಕ್ತಿಕೇಂದ್ರಿತವಾದವುಗಳು. ಬಹಳ ಹಿಂದಿನಿಂದಲೂ ರೂಢಿಯಲ್ಲಿದ್ದ ಸಂಪ್ರದಾಯ, ಮೌಲ್ಯಗಳನ್ನು ನಯವಾಗಿ ಯಾವುದೇ ಘರ್ಷಣೆಗಳಿಲ್ಲದೇ ಮೀರುವ ಯತ್ನ ಕಥೆಗಳಲ್ಲಿನ ವಿವಿಧ ಪಾತ್ರಗಳು ನಿರ್ವಹಿಸುತ್ತವೆ. ಹೀಗಾಗಿ ಇಲ್ಲಿಯೂ ಜನ ತುಂಬಾ ಸಹಜವಾಗಿ ಹೊಸ ಮೌಲ್ಯಗಳ ಪ್ರತಿಪಾದಕರಾದ ಕ್ರಾಂತಿಕಾರಕರಾಗುತ್ತಾರೆ. ತಮ್ಮೆಲ್ಲ ಗೊಂದಲ, ಹಠಮಾರಿತನ, ಅಸಂಬದ್ಧತೆ ಇವುಗಳನ್ನು ನಿಗ್ರಹಿಸಿ ಹೊಸ ದಿಕ್ಕಿನ ಕಡೆಗೆ ನಡೆಯುತ್ತಿರುವ ತುಡಿತಗಳನ್ನು ವ್ಯಕ್ತಪಡಿಸುವುದರೊಂದಿಗೆ ಪರಂಪರೆಯೊಂದಿಗೆ ಸೆಣೆಸಾಟ ಪ್ರಾರಂಭಿಸುತ್ತಾರೆ. ಮೇಲೆ ಚರ್ಚಿಸಿದಂತೆ ಶ್ಯಾಮಲ, ಚೆಲುವಮ್ಮ, ಉಮಾಪತಿ, ಬಸಲಿಂಗ, ದೇವಿ, ಸ್ಟೆಲ್ಲಾ, ಪರಮೇಶಿ ಮುಂತಾದ ವ್ಯಕ್ತಿಗಳು ಹೊಸ ಆಲೋಚನೆಯ ಸುಳಿಯಲ್ಲಿ ಸಿಲುಕಿದವರು. ಪರಂಪರೆಯನ್ನು ಪ್ರಶ್ನಿಸಿದವರು. ಪರಂಪರೆಯ ಮುಂದೆ ಜೀವನದ ಹೊಸ ಹಾದಿಯನ್ನು ತೋರಿಸಲು ಹೇಳಿಕೊಡುವ ಮೂಲಕ ಪರಂಪರೆಯನ್ನು ಧಿಕ್ಕರಿಸುವ ಪ್ರಯತ್ನಕ್ಕೆ ಕೈಹಾಕಿದವರು ಯಶಸ್ಸನ್ನು ಕಂಡವರು.

ಲಂಕೇಶರ ಕಥೆಗಳ ಸಂವೇದನೆ ಹಿಂದಿಗಿಂತ ಹೆಚ್ಚು ಸಂಕೀರ್ಣವಾದದ್ದು ಮತ್ತು ವಿಸ್ತಾರವಾದದ್ದು. ಕಳೆದ ಒಂದು ದಶಕದ ರಾಜಕೀಯ ಮತ್ತು ಮಾನವತಾವಾದದ ನೆಲೆಗಳ ಪ್ರಭಾವ ಸೂಕ್ಷ್ಮವಾಗಿ, ಬಹುಮುಖಿಯಾಗಿ ಆಗಿರುವುದು ಕಥೆಗಳ ಯಶಸ್ಸಿಗೆ ಕಾರಣ ಎಂದು ಹೇಳಬಹುದು. ದಟ್ಟ ಶೋಷಣೆಯಾಗಲಿ, ಹಿಂಸೆಯ ಅತಿರೇಕವಾಗಲಿ ಕಥೆಗಳಲ್ಲಿ ಕಾಣುವುದಿಲ್ಲ. ಬದಲಿಗೆ ಯೋಗ್ಯವಾಗಿ ಬದುಕಲು ಪ್ರಯತ್ನಿಸಿರುವ ಅನೇಕ ಹೋರಾಟಗಳಿವೆ. ಈ ಹೋರಾಟಗಳು ಎಂದೂ ಕ್ರಾಂತಿಕಾರಕ ಸ್ವರೂಪ ಪಡೆದುಕೊಳ್ಳದೇ ಇರುವುದು ಕಥೆಗಳ ವೈಶಿಷ್ಟ್ಯತೆ.

ಕಥೆಗಳಲ್ಲಿ ಬರುವ ಸ್ತ್ರೀಯರು, ಬಡವರು, ಶ್ರೀಮಂತರು, ಜಮೀನ್ದಾರರು, ಸ್ಪೃಶ್ಯರು, ಅಸ್ಪೃಶ್ಯರು ಇವರೆಲ್ಲರ ನಡುವೆ ಘರ್ಷಣೆಗಳು ಅಪರೂಪ. ಬದಲಿಗೆ ಮೌಲ್ಯಗಳ ತಾಕಲಾಟ ನಡೆದಿದೆ. ಸ್ತ್ರೀಯರು, ಬಡವರು, ಅಸ್ಪೃಶ್ಯರು ಮಾಡುವ ಹೋರಾಟಗಳಲ್ಲಿ ಬದುಕುವ ಹಂಬಲವನ್ನು ಕಾಣುತ್ತೇವೆ. ಅಧಿಕಾರ, ಹಣ, ಮಾನ್ಯತೆ ಎಲ್ಲವನ್ನು ಗಳಿಸಿದ ಶ್ರೀಮಂತರು ಜಮೀನ್ದಾರರು ದರ್ಪದ ನೆಲೆಯಲ್ಲಿ ಕಾಣಿಸದೇ ಕನಿಷ್ಟ ಮನುಷ್ಯತ್ವದ ಮೌಲ್ಯಗಳ ಹುಡುಕಾಟದಲ್ಲಿ ಕಾಣಿಸುತ್ತಾರೆ.

ಒಟ್ಟಾರೆ 'ವ್ಯಕ್ತಿ'ಯ ವಿವಿಧ ರೂಪಗಳು ಪರಂಪರೆಯನ್ನು ಪ್ರಶ್ನಿಸುವ, ಧಿಕ್ಕರಿಸುವ ನೆಲೆ ಬಹಳ ಅತಿರೇಕದ, ರೋಷದ, ಘರ್ಷಣೆಯ ಸ್ವರೂಪವನ್ನು ಪಡೆಯದೇ ಶಾಂತಿ, ಸಂಯಮದಿಂದ ಆಗುವುದು ವಿಶೇಷ. ಆದ್ದರಿಂದಲೇ ಲಂಕೇಶರ ಕಥೆಗಳ ದೃಷ್ಟಿಕೋನ ನವ್ಯತೆಯಿಂದ ಕೂಡಿದೆ.

### ೩.೩ 'ವ್ಯಕ್ತಿ'ಯಲ್ಲಾದ ಬದಲಾವಣೆಗಳು :

ಲಂಕೇಶರ ಕಥೆಗಳ ಶೀರ್ಷಿಕೆಗಳೇ 'ವ್ಯಕ್ತಿ'ಯಲ್ಲಾದ ಬದಲಾವಣೆಗಳ ಪ್ರತಿಮೆಗಳಂತೆ ಕಾಣುತ್ತವೆ. ಎಂಥ ಶಕ್ತಿಶಾಲಿ ಮನುಷ್ಯನಿಗೂ ತನ್ನ ಜೀವಮಾನವಿದೆ. ಅದೇ ರೀತಿ ಬದುಕಲು ಸಾಧ್ಯವಿಲ್ಲ. ನಿಸರ್ಗದ ನಡುವಿನ ಮನುಷ್ಯ ತನ್ನ ಸುತ್ತಲಿನ ಎಲ್ಲರ ಮೇಲೆ, ಎಲ್ಲದರ ಮೇಲೆ ಹತೋಟಿಯನ್ನು ಸಾಧಿಸುವಲ್ಲಿ ಯಶಸ್ವಿಯಾಗುತ್ತಿರುವಾಗಲೇ ಸತ್ಯದ ದರ್ಶನವೊಂದನ್ನು ಪಡೆಯುತ್ತಾನೆ. ಅವನಲ್ಲಿ ಸಾಮಾಜಿಕತೆಯ ಅರಿವು ಮಾಡುತ್ತಾ ಇದ್ದಂತೆ ಮನುಷ್ಯ ತನ್ನೆಲ್ಲ ಕ್ರೌರ್ಯದ ನಂತರ ಯಾವುದೋ ಒಂದು ಘಟ್ಟದಲ್ಲಿ ಜೀವನದ ನಿಜ ಮೌಲ್ಯಗಳ ದರ್ಶನ ಪಡೆದು ಆ ದಿಕ್ಕಿನಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಯತ್ನಿಸುತ್ತಾನೆ. ಮೊದಲನೆಯ ಸಲ ಇಲ್ಲಿ ಮನುಷ್ಯ ತನ್ನೆಲ್ಲ ಕ್ರೌರ್ಯದ ನಂತರ ಪಶ್ಚಾತ್ತಾಪದಂತಹ ಪರಿಹಾರಕ್ಕಾಗಿ ಹಾತೊರೆಯುವುದು ಕಂಡುಬರುತ್ತದೆ. ಕಾರಣ ತಾನು ದರ್ಪದಿಂದ ಏನೆಲ್ಲ ಹಣ, ಅಧಿಕಾರ ಮಾನ್ಯತೆ ಸಂಪಾದಿಸಿದ್ದರೂ ಅವುಗಳಿಗೆಲ್ಲಕ್ಕಿಂತ ಮಿಗಿಲಾದುದನ್ನು ಏನನ್ನೋ ಕಳೆದುಕೊಂಡಿರುವುದರ ಅರಿವಾಗತೊಡಗುತ್ತದೆ. ಆಗ ಅವನಲ್ಲಿ ಕನಿಷ್ಟ ಮನುಷ್ಯತ್ವದ ಮೌಲ್ಯಗಳಿಗಾಗಿ ಹುಡುಕಾಟ ಪ್ರಾರಂಭವಾಗುತ್ತದೆ. ಇದಕ್ಕಾಗಿ ತಾನು ಏನೂ ಮಾಡಲೂ ಸಿದ್ಧವಾಗಿರುತ್ತಾನೆ. ಹೀಗೆ ಜೀವನ ಪ್ರೀತಿಯ ಶಾಶ್ವತ ಮೌಲ್ಯಗಳ ಹುಡುಕಾಟ ಪ್ರಾರಂಭವಾಗಿ ಕ್ರಮೇಣ ಮನುಷ್ಯ ಮೃದುವಾಗುತ್ತಾನೆ. ಈ ಅಂಶಗಳನ್ನು ಆಧರಿಸಿ 'ವ್ಯಕ್ತಿ'ಯಲ್ಲಾದ ಬದಲಾವಣೆಗಳನ್ನು ಲಂಕೇಶರ ಕಥೆಗಳು ನಿರೂಪಿಸುತ್ತವೆ.

ಜಮೀನ್ದಾರನಾಗಿದ್ದರೂ, ತನ್ನ ಸಾವಿರಾರು ಎಕರೆ ಜಮೀನನ್ನು ಹಳ್ಳಿಯವರಿಗೆ ಹಂಚಿದರೂ ಕಳೆಗುಂದದೇ ಇದ್ದ ಕೃಷ್ಣಸ್ವಾಮಿ ಬದಲಾವಣೆಯ ಪ್ರತಿಮೆಯಾಗಿದ್ದಾನೆ. ಅಮೃತಾಂಬುದಿಯ ಮಲ್ಲಯ್ಯ ಪ್ರೀತಿ–ಪ್ರೇಮದ ವಿಷಯದಲ್ಲಿ ಕಟುಕನಾದರೂ ತನ್ನ ಮಗಳ ಪ್ರೀತಿಯನ್ನು ಸಾರಾಸಗಟಾಗಿ ಮೌನವಾಗಿ ಒಪ್ಪುತ್ತಾನೆ. ಜಾತಿಹಿಂಸೆಯ ಪಾಪಕ್ಕೆ ಬಸಲಿಂಗ ಪ್ರಾಯಶ್ಚಿತ ಮಾಡಿಕೊಳ್ಳುತ್ತಾನೆ. ದಾಹ ಕಥೆಯ ನಿವೇದಕ ತನ್ನ ಕಾಮದಾಹಕ್ಕೆ ಕಡಿವಾಣ

ಹಾಕುತ್ತಾನೆ. ಹೊಸ ಬದುಕನ್ನು ಕಂಡುಕೊಳ್ಳುವ ಸ್ಟೆಲ್ಲಾ, ಊರನ್ನೇ ಉರಿಸಿದ ಚೆಲುವಮ್ಮನ ಆತ್ಮಸ್ಥೈರ್ಯ ಹೊಸ ಸಮಾಜದ ನಾಂದಿಗೆ ಕಾರಣವಾಗಿದೆ. ಒಟ್ಟಾರೆ 'ವ್ಯಕ್ತಿ'ಯಲ್ಲಾದ ಈ ರೀತಿಯ ಬದಲಾವಣೆಗಳು ಕಥೆಗಳಲ್ಲಿ ಹೊಸ ಸಾಮಾಜಿಕ ನ್ಯಾಯವನ್ನು ಪ್ರತಿಪಾದಿಸುವಂತಿದೆ.

ಅಧ್ಯಾಯ-೪

# ಲಂಕೇಶರ ಕಥೆಗಳು 'ಕಟ್ಟುವ ಸಮಾಜ'

ಲಂಕೇಶರ ಕಥೆಗಳು ಭಾರತೀಯ ಸಮಾಜದಲ್ಲಿ ನಡೆಯುವ ಒಂದು ಮಹಾಪ್ರಯಾಣದಂತೆ ಕಂಡುಬರುತ್ತವೆ ಬದಲಾವಣೆಯ ಮಹಾಪ್ರಕ್ರಿಯೆಯೊಂದು ಭಾರತೀಯ ಬದುಕಿನ ಎಲ್ಲಾ ಮೂಲೆಗಳಲ್ಲೂ ವ್ಯಾಪಿಸಿರುವ ಅನುಭವವನ್ನು ಲಂಕೇಶರ ಕಥೆಗಳು ಪರಿಣಾಮಕಾರಿಯಾಗಿ ರೂಪಕಗಳ ಮೂಲಕ ಹೇಳುತ್ತವೆ. ಕಥೆಗಳಲ್ಲಿ ಕಲ್ಲು ಕರಗುತ್ತವೆ. ಊರು ಉರಿಯುತ್ತದೆ. ಭಾರತೀಯ ಸಮಾಜ ಅನುಭವಿಸುತ್ತಿರುವ ಪ್ರಳಯ ರೂಪಿ ತಲ್ಲಣಗಳ ಹೃದಯಸ್ಪರ್ಶಿ ಘಟನೆಗಳಿವೆ. ಈ ಅಂಶಗಳೊಂದಿಗೆ ಹೊಸ ಸಮಾಜದ ಕನಸನ್ನು ಕಾಣಲು ಹಂಬಲಿಸುವ ವ್ಯಕ್ತಿಗಳು ಹೊಸ ಬಗೆಯ ಸಮಾಜ ಕಟ್ಟುವ ಕನಸುಗಳಿಗೆ ಲಂಕೇಶರ ಕಥೆಗಳು ಮುನ್ನುಡಿ ಹಾಕಿದಂತೆ ಕಂಡುಬರುತ್ತವೆ.

ಲಂಕೇಶರ ಕಥೆಗಳಲ್ಲಿ ಚಿತ್ರಿಸಿರುವ ಹಳ್ಳಿ ಸ್ವಾತಂತ್ರ್ಯದ ಹಿಂಚು ಮುಂಚಿನ ಹಳ್ಳಿ. ಆಗಲೇ ಹಳ್ಳಿಯ ಬದುಕಿನ ಸಾಂಪ್ರದಾಯಿಕ ಸ್ಥಿರತೆಯ ಮೂಲಗಳು ಕಣ್ಮರೆಯಾಗಲು ಪ್ರಾರಂಭವಾಗಿದ್ದವು. ಈ ಸಾಂಪ್ರದಾಯಿಕ ಸ್ಥಿರತೆ, ನೆಮ್ಮದಿ ಎನ್ನುವುದು ಕೂಡಾ ತಲತಲಾಂತರದಿಂದ ಬಂದಿದ್ದ ಜಾತಿ ಮತ್ತು ವರ್ಗ ಅಸಮಾನತೆಗಳ ಮೇಲೆ ನಿಂತಿರುವಂಥದ್ದು. ಈ ಜಾತಿ ಮತ್ತು ವರ್ಗ ಅಸಮಾನತೆಗಳು ಅತಿರೇಕಕ್ಕೇರಿದ ಸನ್ನಿವೇಶವಾಗಲಿ, ಹಿಂಸಾತ್ಮಕ ಸ್ವರೂಪಕ್ಕೆ ಹೋಗುವುದಾಗಲಿ ಲಂಕೇಶರ ಕಥೆಗಳಲ್ಲಿ ಕಂಡುಬರುವುದಿಲ್ಲ. ಬದಲಾಗಿ ಲಂಕೇಶರ ಕಥೆಗಳಲ್ಲಿ ಸಮಾಜದಲ್ಲಿ ನಡೆಯುವ ಜಾತಿವರ್ಗಕ್ಕೆ ಸಂಬಂಧಿಸಿದ ಚಟುವಟಿಕೆಗಳು ವಸ್ತುನಿಷ್ಠ ಧೋರಣೆಯನ್ನು ಒಳಗೊಂಡಿರುತ್ತವೆ.

ಲಂಕೇಶರ ಕಥೆಗಳು ಚಿತ್ರಿಸುವ ಗ್ರಾಮ ಸಮಾಜದಲ್ಲಿ ಹೊಸಬಗೆಯ ನೀತಿ ಅಥವಾ ಅನೀತಿ ಹುಟ್ಟುತ್ತಿರುವುದು ಅಶಾಂತಿಗೆ ಎಡೆ ಮಾಡಿಕೊಡುತ್ತದೆ. ಇಂತಹ ಸಂಕ್ರಮಣ ಸ್ಥಿತಿಯ ಹಳ್ಳಿಗಳು ಬದಲಾವಣೆಯ ಸ್ವರೂಪವನ್ನು ವ್ಯಕ್ತಪಡಿಸುತ್ತದೆ. ಹೊಸ ಜನಾಂಗದ ಲೌಕಿಕ ಯಶಸ್ಸು ಹಳೆಯ ಜನಾಂಗಕ್ಕೆ ದೊಡ್ಡ ಆಘಾತವುಂಟು ಮಾಡುತ್ತದೆ. ಹೊಸ ತಲೆಮಾರಿನವರ ಯಶಸ್ಸಿನ ಹಾದಿ ಹಳೆಯ ತಲೆಮಾರಿಗೆ ಶುದ್ಧ ಅನೈತಿಕವಾಗಿ ಕಾಣುತ್ತದೆ. ಹೀಗೆ ಭಿನ್ನ ತಲೆಮಾರುಗಳ ನಡುವೆ ಘರ್ಷಣೆಗಳು ಕಥೆಗಳ ಉದ್ದಕ್ಕೂ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. 'ಉರಿದ ಊರಿನವರು' ಕಥೆಯ ಬೈಲಳ್ಳಿಯಲ್ಲಿ ವಾಸವಾಗಿರುವ ಚೆಲುವಮ್ಮ

ಮತ್ತು 'ಕಲ್ಲು ಕರಗುವ ಸಮಯ' ಕಥೆಯ ಮಲ್ಲಯ್ಯ ಈ ಇಬ್ಬರಿಗೂ ಹೊಸ ಜಗತ್ತಿನ ಯಶಸ್ಸಿನ ದಾರಿಗಳು ಅರ್ಥವಾಗುವುದಿಲ್ಲ ಅಥವಾ ಅರ್ಥವಾದರೂ ಅವುಗಳ ಬಗ್ಗೆ ದಟ್ಟ ತಿರಸ್ಕಾರವಿದೆ.

ಕಥೆಗಳಲ್ಲಿ ಕಾಣುವ ಗ್ರಾಮ ಸಮಾಜದಲ್ಲಿ ವಾಸವಾಗಿರುವ ವಿದ್ಯಾವಂತ ಯುವಕರ ದೃಷ್ಟಿಕೋನಗಳು ಮತ್ತು ಅನುಭವ ಎಲ್ಲವು ತಲೆಕೆಳಗಾಗುತ್ತವೆ. ಇದು ಹೊಸ ಜನಾಂಗ ಪಡೆದಿರುವ ವಿದ್ಯಾಭ್ಯಾಸವಿರಬಹುದು ಅಥವಾ ಹಳ್ಳಿಯ ಬದುಕಿನ ಬಗ್ಗೆ ಬೆಳೆದಿರುವ ದಟ್ಟ ತಿರಸ್ಕಾರದ ಫಲವಿರಬಹುದು ಅಥವಾ ನಗರದ ಆಕರ್ಷಣೆಯ ಫಲವಿರಬಹುದು.

ಹೀಗೆ ಕಾರಣಗಳೇನೇ ಇದ್ದರೂ ಗ್ರಾಮ ಸಮಾಜ ಮತ್ತು ವಿದ್ಯಾವಂತರ ನಡುವೆ ಬಿರುಕಿರುವುದು ಸತ್ಯ. 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಯಲ್ಲಿಯ ಪರಮೇಶ ವಿದ್ಯಾಭ್ಯಾಸವನ್ನು ಮುಗಿಸಿ ಬಂದಿರುತ್ತಾನೆ. ಇವನು ಹಳ್ಳಿಯ ಜನರನ್ನು ಮತ್ತು ಹಳ್ಳಿಯನ್ನು ಒಗ್ಗಿಕೊಳ್ಳಲಾರದೇ ತಳಮಳಕ್ಕೆ ಒಳಗಾಗುತ್ತಾನೆ. ಅದೇ ರೀತಿ 'ಉಮಾಪತಿಯ ಸ್ಕಾಲರ್‌ಶಿಫ್ ಯಾತ್ರೆ'ಯ ಉಮಾಪತಿಗೆ ವಿದ್ಯೆ ಕಲಿತು ಪ್ರಬುದ್ಧನಾದ ನಂತರ ತನ್ನ ತಾಯಿ ಮತ್ತು ಅಕ್ಕ ಲಿಂಗಿಯ ವರ್ತನೆಗಳು ಅನಾಗರೀಕವಾಗಿ ಕಾಣುತ್ತವೆ. ಉಮಾಪತಿ ಮತ್ತು ಪರಮೇಶಿ ಇಬ್ಬರಲ್ಲೂ ನಗರದ ಆಕರ್ಷಣೆಯಿಂದ ಹಳ್ಳಿಯ ಬಗ್ಗೆ ತಿರಸ್ಕಾರದ ಧೋರಣೆಯನ್ನು ತಾಳುತ್ತಾರೆ. ಲಂಕೇಶರ ಕಥೆಗಳಲ್ಲಿ ಪಿತೃಪ್ರಧಾನ ಮೌಲ್ಯಗಳಿರುವ ಸಮಾಜ ಪ್ರಮುಖವಾಗಿ ಕಂಡುಬರುತ್ತದೆ. ಇಲ್ಲಿ ವರ್ಗ, ಜಾತಿ, ಲಿಂಗ ತಾರತಮ್ಯ ಸಾಮಾನ್ಯವಾಗಿ ಕಂಡುಬರುತ್ತವೆ. ಆದರೆ ಅತಿಯಾದ ಅಸಮಾನತೆ ಕಂಡುಬರುವುದಿಲ್ಲ. ಅತಿರೇಕದ ಸನ್ನಿವೇಶಗಳು ಸಿಗುವುದಿಲ್ಲ.

ಈ ಅಧ್ಯಾಯದಲ್ಲಿ ಲಂಕೇಶರ ಕಥೆಗಳಲ್ಲಿ ಕಂಡುಬರುವ ಸಮಾಜವನ್ನು ನಾಲ್ಕು ಆಯಾಮಗಳಿಂದ ನೋಡುವ ಪ್ರಯತ್ನವನ್ನು ನಡೆಸಲಾಗಿದೆ. ಇಲ್ಲಿ ಪ್ರಮುಖವಾಗಿ ಕಂಡುಬರುವಂತಹದ್ದು.

೧. ಜಮೀನ್ದಾರಿ ಪದ್ಧತಿಯನ್ನು ಧಿಕ್ಕರಿಸುವ ಸಮಾಜ.

೨. ಜಾತಿ ಪದ್ಧತಿಯನ್ನು ಧಿಕ್ಕರಿಸುವ ಸಮಾಜ.

೩. ಮಹಿಳೆಯರಿಗಾಗಿ ಪ್ರಾಮುಖ್ಯತೆ ನೀಡುವ ಸಮಾಜ.

೪. ನಗರ ಮತ್ತು ಗ್ರಾಮದ ನಡುವಿನ ಸಮತೋಲನವನ್ನು ಪ್ರತಿಬಿಂಬಿಸುವ ಸಮಾಜ.

## ೪.೧ ಜಮೀನ್ದಾರಿ ಪದ್ಧತಿಯನ್ನು ಧಿಕ್ಕರಿಸುವ ಸಮಾಜ :

ವರ್ಗವ್ಯವಸ್ಥೆ ಅನಾದಿ ಕಾಲದಿಂದ ದಮನಕಾರಿಯಾದದ್ದು ಉಚ್ಚ-ನೀಚ ಎನ್ನುವ ಭಾವನೆಯನ್ನು ಹುಟ್ಟುಹಾಕಿರುವಂತಹದ್ದು. ಜಮೀನ್ದಾರರು ಸಾಧಾರಣವಾಗಿ ಮೇಲ್ವರ್ಗದವರೆಂದೇ ಸಾವಿರಾರು ಎಕರೆ ಭೂಮಿಯನ್ನು ಸ್ವಂತದ್ದಾಗಿ ಮಾಡಿಕೊಂಡು ಗುರುತಿಸಿಕೊಳ್ಳುತ್ತಾರೆ, ಮೆರೆಯುತ್ತಿರುತ್ತಾರೆ. ಊರಿನಲ್ಲಿರುವ ವಿವಿಧ ವರ್ಗದ ಜನರನ್ನು ಜೀತದಾಳುಗಳಾಗಿ ಮಾಡಿಕೊಂಡಿರುತ್ತಾರೆ. ಹಿಂಸೆಯನ್ನು ಏರುವ ವರ್ಗಕ್ಕೆ ಜಮೀನ್ದಾರರು ಸೇರಿರುತ್ತಾರೆ. ಒಡೆಯನ ವಿರುದ್ಧ ಧ್ವನಿಯೆತ್ತಲು ಹಿಂಜರಿಯುತ್ತಿದ್ದ ಜೀತದಾಳುಗಳು. ಅಡಿಯಾಳಾಗಿ ಒಡೆಯನ ಜಮೀನಿನಲ್ಲಿ ಹಗಲು ರಾತ್ರಿ ಕಷ್ಟಪಟ್ಟು ದುಡಿಯುತ್ತಿರುತ್ತಾರೆ. ಭಾರತದ ಹಲವಾರು ಪ್ರದೇಶಗಳಲ್ಲಿ ಇಂತಹ ಜಮೀನ್ದಾರಿ ಪದ್ಧತಿ ಇನ್ನು ಜೀವಂತವಾಗಿರುವ ಸನ್ನಿವೇಶಗಳಿವೆ.

ಕಾಲ ಉರುಳಿದಂತೆ ವ್ಯಕ್ತಿಗಳಲ್ಲಿ ಬದಲಾವಣೆಗಳು ಆದಂತೆ ಸಮಾಜ ಬದಲಾಗುತ್ತದೆ. 'ಉಳುವವನೆ ಭೂಮಿಯ ಒಡೆಯ' ಎಂಬ ಕಾನೂನು ಅಸ್ಥಿತ್ವಕ್ಕೆ ಬಂತು. ಆಗ ಜೀತ ಪರಂಪರೆ ಮುಕ್ತಿ ಪಡೆಯಲು ಸಜ್ಜಾಯಿತು. ಅಸಹಾಯಕತೆಯ ವಿರುದ್ಧ ಧ್ವನಿ ಎತ್ತಲಾರಂಭಿಸಿತು. ನೋವು-ಮೋಸ, ಹಿಂಸೆ ಇತ್ಯಾದಿಗಳನ್ನು ರೋಷದಿಂದ ಪ್ರಶ್ನಿಸುವ ಪರಿಯನ್ನು ಜೀತದಲ್ಲಿದ್ದವರು ಅಳವಡಿಸಿಕೊಂಡರು. ಇಂತಹ ಸಂದರ್ಭದಲ್ಲಿ ರಚನೆಯಾದ ಕಥೆ ಲಂಕೇಶರ ಉಲ್ಲಂಘನೆ.

ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿರುವ ಜಮೀನ್ದಾರಿ ಪದ್ಧತಿ. 'ಉಲ್ಲಂಘನೆ' ಕಥೆಯ ವಸ್ತು. ಸಾಮಾಜಿಕ ಕ್ರಾಂತಿ ಇಲ್ಲಿ ಸದ್ದಿಲ್ಲದೇ ನಿಶ್ಯಬ್ಧವಾಗಿ ಆಗುತ್ತದೆ. ಫ್ಯೂಡಲ್ ವ್ಯವಸ್ಥೆಯನ್ನು ಪ್ರತಿನಿಧಿಸುವ 'ಕೃಷ್ಣಸ್ವಾಮಿ' ಕಥೆಯಲ್ಲಿ ಮಾನವೀಯ ಆಯಾಮದ ಚೌಕಟ್ಟಿನಲ್ಲಿ ಕಾಣಿಸಿಕೊಳ್ಳುತ್ತಾನೆ. ಪ್ರಾಮಾಣಿಕತೆ, ಸಂಯಮ, ಪ್ರೀತಿ, ವಿಶ್ವಾಸ ಮುಂತಾದ ಮಾನವೀಯ ಮೌಲ್ಯಗಳು ತುಂಬಿರುವ ಕೃಷ್ಣಸ್ವಾಮಿ 'ಮಹಾಭಕ್ತ'ನಾಗಿ ಕಾಣಿಸಿಕೊಳ್ಳುತ್ತಾನೆ. ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರನಂತರದ ಕೆಲವು ವರ್ಷಗಳಲ್ಲಿ ಕಂಡಂತಹ ಜಮೀನ್ದಾರಿ ವರ್ಗದ ವ್ಯಕ್ತಿಗಳಿಗೆ ವಿರುದ್ಧವಾಗಿ ಕೃಷ್ಣಸ್ವಾಮಿ ಗೋಚರಿಸುತ್ತಾನೆ. ಅದೇ ರೀತಿ ರೈತಾಪಿವರ್ಗವೂ ಕಥೆಯಲ್ಲಿದೆ. ಕೆಂಚ, ಭರಮ, ರೈತಾಪಿವರ್ಗವನ್ನು ಪ್ರತಿನಿಧಿಸುತ್ತಾರೆ.

ಸಮಕಾಲೀನ ಸಮಸ್ಯೆಗೆ ಸ್ಪಂದಿಸುವ ಅಂಶದಿಂದ ಮುಖ್ಯವಾಗಿರುವ 'ಉಲ್ಲಂಘನೆ' ಕಥೆಯಲ್ಲಿ ಜಾತಿ, ವರ್ಗಸಂಘರ್ಷಗಳು ಹಾಗೂ ಮನುಷ್ಯ ಸಂಬಂಧಗಳ ಸಂಕೀರ್ಣತೆಗಳ 'ಮುಕ್ತ ಚರ್ಚೆ'ಯಿದೆ. ಸಾಮಾನ್ಯವಾಗಿ ಜಮೀನ್ದಾರಿ ಪದ್ಧತಿಯಲ್ಲಿ ಹೆಣ್ಣಿಗೆ ಕೆಳಮಟ್ಟದ ಸ್ಥಾನ ಇರುತ್ತದೆ. ಆದರೆ ಈ ಕಥೆಯಲ್ಲಿ ಬರುವ ಕೃಷ್ಣಸ್ವಾಮಿಯ ಹೆಂಡತಿ ಗಿರಿಜಮ್ಮ ಮತ್ತು ನಾಗಾನ ಸ್ನೇಹಿತೆ ಸೀತಾ ಅಸಹಾಯಕರಾಗಿ ಕಂಡುಬರುವುದಿಲ್ಲ.

ಜಮೀನ್ದಾರಿ ಪದ್ಧತಿಯ ಹಿನ್ನೆಲೆಯಲ್ಲಿ ಪರಿಶೀಲಿಸಿದರೆ ಭೂಮಾಲೀಕನಾದ್ದರಿಂದ ಕೃಷ್ಣಸ್ವಾಮಿಯು ಜಮೀನ್ದಾರನಾಗಿಯೂ ಮತ್ತು ರೈತನಾದ್ದರಿಂದ ಭರಮನು ಜಮೀನ್ದಾರಿ ಪದ್ಧತಿಯಿಂದ ಶೋಷಣೆಗೊಳಗಾಗುವ ವ್ಯಕ್ತಿಯಾಗಿಯೂ ಪ್ರಸ್ತುತವಾಗುತ್ತಾರೆ. ರೈತನಾಗಿ ಒಡೆಯನ ಭೂಮಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಭರಮನು ಜಮೀನ್ದಾರಿ ಪದ್ಧತಿಯ ವಿರುದ್ಧ ಯಾವುದೇ ಕಾರಣಕ್ಕೂ ಧ್ವನಿಯೆತ್ತುವುದೂ ಕಥೆಯಲ್ಲಿ ಕಂಡುಬರುವುದಿಲ್ಲ. ಕೃಷ್ಣಸ್ವಾಮಿಯು ಭೂಮಿಯ ಮಾಲೀಕನಾಗಿ, ಭರಮನ ಒಡೆಯನಾಗಿದ್ದರೂ ಸಹ "ಉಳುವವನೇ ಭೂಮಿಯ ಒಡೆಯ" ಎಂಬ ಕಾನೂನು ಜಾರಿಗೆ ಬರುವ ಮೊದಲೆ ಹುಳಿಮಾವಿನ ಜಮೀನನ್ನು ಭರಮನಿಗೆ ಕೊಟ್ಟಿರುತ್ತಾರೆ. 'ಉಳುವವನೆ ಭೂಮಿಗೆ ಒಡೆಯ' ಎಂಬ ಕಾನೂನು ಬಂದ ತಕ್ಷಣವೇ ಕೆಂಚ, ವೆಂಕಟೇಶನಂತಹ ಊರಿನ ಪುಡಾರಿಗಳು ಕೃಷ್ಣಸ್ವಾಮಿ ಮತ್ತು ಭರಮನ ನಡುವಿನ ಸಂಬಂಧಗಳನ್ನು ತಲೆಕೆಳಕಾಗಿಸುವುದರ ಮೂಲಕ ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸಿಕೊಳ್ಳುತ್ತಾರೆ. ಆದರೆ ಕಥೆಯಲ್ಲಿ ಎಲ್ಲಿಯೂ ವಿಕೋಪಕ್ಕೇರಿದ ನಡವಳಿಕೆಗಳು ಕಂಡುಬರುವುದಿಲ್ಲ. ವಿದ್ಯೆ ಕಲಿತು ಹೊಸ ಸಂವೇದನೆಯನ್ನು ಬೆಳೆಸಿಕೊಂಡ ನಾಗನಿಗೆ ತಮ್ಮ ಜನಕ್ಕಾಗುತ್ತಿದ್ದ ಅವಮಾನದ ಕಾರಣದಿಂದಾಗಿ ಕೆಂಚ, ವೆಂಕಟೇಶರ ರೋಷ ನಿಜ ಅನ್ನಿಸುತ್ತಿತ್ತು. ಆದರೆ ಕೃಷ್ಣಸ್ವಾಮಿಯವರ ನಿರ್ಮಲ ಮುಖ ನಾಗನಿಗೆ ಚಿಂತೆಗೀಡುಮಾಡುತ್ತಿತ್ತು.

ಕೃಷ್ಣಸ್ವಾಮಿ ತನ್ನ ಸಾವಿರಾರು ಎಕರೆ ಭೂಮಿಯನ್ನು ರೈತಾಪಿವರ್ಗದವರಿಗೆ ಹಂಚಿಕೊಟ್ಟು ನಿರ್ಮಲವಾಗಿ ಕಂಗೊಳಿಸುವ ಜಮೀನ್ದಾರಿ ಪದ್ಧತಿಗೆ ವಿರೋಧಭಾಸವಾಗಿ ಕಂಡುಬರುತ್ತಾರೆ. ಸಮಾಜದಲ್ಲಿನ ವ್ಯಕ್ತಿಗಳು ಒಂದೇ ನಿರ್ದಿಷ್ಟ ಮೌಲ್ಯಕ್ಕೆ ಅಂಟಿಕೊಳ್ಳಲೆತ್ನಿಸುವುದಿಲ್ಲ. ವಿಶಾಲವಾದ ಯೋಚನೆಗಳಿಂದ ಬದಲಾಗುತ್ತಾರೆ ಎಂಬುದಕ್ಕೆ ಈ ಕಥೆಯ ವ್ಯಕ್ತಿಗಳು ಸಾಕ್ಷಿಯಾಗಿದ್ದಾರೆ. ಈ ಕಥೆಯಲ್ಲಿನ ವ್ಯಕ್ತಿಗಳು ಕಟ್ಟುವ ಸಮಾಜ ನೀತಿಯಿಂದ ಬಂದದ್ದು, ಬದಲಾವಣೆಯ ಪ್ರತೀಕದಂತಿರುವುದಾಗಿದೆ.

### ೪.೨ ಜಾತಿ ಪದ್ಧತಿಯನ್ನು ಧಿಕ್ಕರಿಸುವ ಸಮಾಜ :

ಜಾತಿ ತಾರತಮ್ಯ ಶತಮಾನಗಳಿಂದಲೂ ಭಾರತೀಯ ಸಮಾಜದಲ್ಲಿ ಹಾಸುಹೊಕ್ಕಾಗಿದೆ. ಮೇಲ್ಜಾತಿ–ಕೆಳಜಾತಿ ಇವೆರಡರ ನಡುವೆ ಅಂತರ ಕಂಡುಬಂದಿದ್ದು, ಈ ಅಂತರವನ್ನು ಉಳಿಸಿಕೊಳ್ಳಲು ಘರ್ಷಣೆಗಳು, ರಕ್ತಪಾತಗಳು ಭಾರತದ ಇತಿಹಾಸದಲ್ಲಿ ನಡೆದಿವೆ. ಇಂತಹ ಭಯಾನಕ ಅಂಶಕ್ಕೆ ಹೊಸ ದಿಶೆಯನ್ನು ನೀಡಿದ ಕಥೆ 'ಕಲ್ಲು ಕರಗುವ ಸಮಯ'.

ಮೇಲ್ಜಾತಿಯಲ್ಲಿ ಹುಟ್ಟಿ ಬೆಳೆದ ಶ್ಯಾಮಲ ತನ್ನ ತಂದೆಯ ಮಾತನ್ನು ಧಿಕ್ಕರಿಸುವ ಸಾಹಸಕ್ಕೆ ಮುಂದಾಗುತ್ತಾಳೆ. ಲಿಂಗಾಯಿತ ಜಾತಿಗೆ ಸೇರಿದ ಹುಡುಗಿ ಸಮಾಜಕ್ಕೆ ವಿರೋಧವಾಗಿ ಕೆಳಜಾತಿಯ ತಿಪ್ಪಣ್ಣನನ್ನು ಪ್ರೀತಿಸುತ್ತಾಳೆ. ಇದನ್ನು ಬಹಳ ನಯವಾಗಿ ಯಾವುದೇ ಘರ್ಷಣೆಗಳಿಲ್ಲದೇ ನಾಜೂಕಿನಿಂದ ಮಲ್ಲಯ್ಯ ಪರಿಹರಿಸುತ್ತಾನೆ. ತನ್ನ ಮಗಳ ಸುಖಕ್ಕಾಗಿ ಪಾರಂಪರಿಕ ಮೌಲ್ಯಗಳಿಗೆ ವಿದಾಯ ಹೇಳಿ ಪರಂಪರೆಯನ್ನು ಮೀರುವ ಪ್ರಯತ್ನ ಮಾಡುತ್ತಾನೆ. ತನ್ನ ಮಗಳ ಪ್ರೀತಿಯನ್ನು ಒಲ್ಲದ ಮನಸ್ಸಿನಿಂದ ಒಪ್ಪಿಕೊಳ್ಳುತ್ತಾನೆ. ಅಂತರ್ಜಾತಿಯ ವಿವಾಹಗಳು ದುರಂತದಲ್ಲಿ ಮುಕ್ತಾಯವಾಗುತ್ತಿದ್ದ ಕಾಲಕ್ಕೆ ವಿದಾಯ ಹೇಳಿ ಸುಖಾಂತವನ್ನು ತಂದುಕೊಡಲು ಯತ್ನಿಸಿದ ಮಲ್ಲಯ್ಯ ಮಾನವೀಯ ನೆಲೆಯಲ್ಲಿ ಕಾಣಿಸುತ್ತಾನೆ.

ಹಾಗೆಯೇ ಶೇಖರಪ್ಪ, ಮೇಲ್ವರ್ಗದ ಬುದ್ಧಿಜೀವಿಯಾಗಿ **'ಉಮಾಪತಿಯ ಸ್ಕಾಲರ್‌ಶಿಫ್ ಯಾತ್ರೆ'** ಕಥೆಯಲ್ಲಿ ಕಾಣಿಸಿಕೊಳ್ಳುತ್ತಾರೆ. ಇದೇ ಕಥೆಯಲ್ಲಿ ಮೇಲುವರ್ಗಕ್ಕೆ ಸೇರಿದ ಮತ್ತೊಬ್ಬ ವ್ಯಕ್ತಿ ನಿಂಗೇಗೌಡ ಕಾಣಿಸಿಕೊಳ್ಳುತ್ತಾನೆ. ಇವರಿಬ್ಬರಲ್ಲೂ ಮಾನವೀಯತೆ ಕಂಡುಬರುತ್ತದೆ. ಕೆಳವರ್ಗದವರನ್ನು ತನ್ನ ಅರಮನೆಯಂತಹ ಮನೆಯಲ್ಲಿ ಕೂರಿಸಿ ಸತ್ಕರಿಸುವ ಔದಾರ್ಯ ಶೇಖರಪ್ಪನಲ್ಲಿದೆ. ಉಮಾಪತಿಯ ತಾಯಿ ಅಕ್ಕ ಲಿಂಗಿ ನಿರಾಂತಕವಾಗಿ ನಿರ್ಭಯವಾಗಿ ತಮಗನ್ನಿಸಿದ್ದನ್ನು ನಿಂಗೇಗೌಡ, ಶೇಖರಪ್ಪನ ಎದುರಿನಲ್ಲಿ ವ್ಯಕ್ತಪಡಿಸುತ್ತಾರೆ.

ಮನೆಯ ಆಚೆ ತೋಟದಲ್ಲಿ ಉಮಾಪತಿಯ ತಾಯಿ ಕಳ್ಳತನದ ಆರೋಪಕ್ಕೆ ಒಳಗಾದ ಸ್ಥಿತಿಯನ್ನು ಕೇಳಿದ ಉಮಾಪತಿ ಸಿಟ್ಟಾಗುವನು. ತನ್ನ ತಾಯಿಯನ್ನು ಅನಾಗರೀಕ ಎಂದು ಬಯ್ಯುವನು. ಹೊಡೆಯಲು ಮುಂದಾಗಿ ಇಲ್ಲಿಂದ ಹೊರಟುಹೋಗು ಎಂದು ಹೇಳುವನು. ಆಧುನಿಕತೆಯ ಬೆನ್ನು ಹತ್ತಿರುವ ಉಮಾಪತಿಯು ಅಮಾನವೀಯವಾಗಿ

ನಡೆದುಕೊಳ್ಳುವನು. ಆದರೆ ಶೇಖರಪ್ಪ ತಾಯಿಯನ್ನು ಹಾಗೆ ಕಡೆಗಣಿಸಬಾರದು. ನಿನ್ನ ಸಲುವಾಗಿ ಆಕೆ ಇಷ್ಟೆಲ್ಲಾ ಮಾಡುತ್ತಾಳೆ ಎಂದು ಸಂತೈಸುವ ಶೇಖರಪ್ಪನಲ್ಲಿ ಕೆಲವು ಉತ್ತಮ ಮೌಲ್ಯಗಳನ್ನು ಕಾಣಬಹುದು.

**'ಅಧಿಕಾರಿಗಳು ಮತ್ತು ಕೆಲಸದವ'** ಕಥೆಯ ಅಧಿಕಾರಿಗಳು ಉನ್ನತವರ್ಗದ ಪ್ರತಿನಿಧಿಗಳಾಗಿ ಕಂಡುಬಂದರೂ, ಕೆಲಸದವನ ಮೇಲಿಟ್ಟಿರುವ ಪ್ರೀತಿ, ವಿಶ್ವಾಸ ಅವರನ್ನು ದೊಡ್ಡತನದ ವ್ಯಕ್ತಿಗಳನ್ನಾಗಿ ಮಾಡುತ್ತದೆ. ಅಧಿಕಾರಿಗಳು ಮತ್ತು ಕೆಲಸದವನ ಅನ್ಯೋನ್ಯ ಸಂಬಂಧ, ರೊಟ್ಟಿ ಚೂರನ್ನು ಕೆಲಸದವನಿಗೆ ಅಧಿಕಾರಿಗಳು ನೀಡುವ ಮೂಲಕ ಅಂತ್ಯವಾಗುತ್ತದೆ. ಇಲ್ಲಿ ಅಧಿಕಾರಿಗಳ ಗೌರವನಿಷ್ಠೆ ಮತ್ತು ಕೆಲಸದವನ ಸ್ವಾಮಿನಿಷ್ಠೆ ಕಥೆಗೆ ಹೊಸ ದಿಕ್ಕನ್ನು ತೋರಿಸಿದೆ.

ವರ್ಗವ್ಯವಸ್ಥೆ ಲಂಕೇಶರ ಕಥೆಗಳಲ್ಲಿ ಜಮೀನ್ದಾರಿ ಪದ್ಧತಿಯ ಸ್ವರೂಪವನ್ನು ತಾಳಿತು. ಜಮೀನ್ದಾರರಾಗಿ ಫ್ಯೂಡಲ್ ವ್ಯವಸ್ಥೆಯನ್ನು ಪ್ರತಿನಿಧಿಸಿದ ಕೃಷ್ಣಸ್ವಾಮಿ, ಶೇಖರಪ್ಪ, ನಿಂಗೇಗೌಡ, ಮಲ್ಲಯ್ಯ ಮೂಲತಃ ಮೃದುಮನಸ್ಸಿನವರಾಗಿ ಕಂಗೊಳಿಸುವ ಸನ್ನಿವೇಶಗಳು ಆಶ್ಚರ್ಯಕರವಾಗಿವೆ. ದಟ್ಟ ಹಿಂಸೆಯ ನೆಲೆಯಲ್ಲಿ ಕಂಡುಬರಬೇಕಿದ್ದ ಈ ವ್ಯಕ್ತಿಗಳು ಮಾನವತವಾದಿಗಳ ಸ್ವರೂಪಿಗಳಾಗಿ ಕಾಣುತ್ತಾರೆ. ಇಲ್ಲಿ ಪಿತೃಪ್ರಧಾನ ಮೌಲ್ಯಗಳು ಕೆಲಸ ಮಾಡಿದ್ದರೂ ಸಹ ಹೆಣ್ಣನ್ನು ಹೀನಾಯವಾಗಿ ಕಾಣುವ ಸಂದರ್ಭಗಳು ಸಿಗುವುದಿಲ್ಲ. ಈ ಮೂಲಕ ಲಂಕೇಶರ ಕಥೆಗಳು ಕಟ್ಟುವ ಸಮಾಜ, ಜಾತಿ, ಧರ್ಮ ನಿರಪೇಕ್ಷಿತ ಸಮಾಜ ಎಂದು ಹೇಳಬಹುದು.

ವರ್ಗವ್ಯವಸ್ಥೆ, ಜಮೀನ್ದಾರಿ ವ್ಯವಸ್ಥೆಗಳು ಸಮಾಜದಲ್ಲಿ ಹಾಸುಹೊಕ್ಕಾಗಿರುವಂತೆ ಲಿಂಗತಾರತಮ್ಯ ಮತ್ತು ಜಾತಿಪದ್ಧತಿಯು ಕಟ್ಟುನಿಟ್ಟಾಗಿರುವುದನ್ನು ಕಾಣಬಹುದು. ಲಿಂಗ ತಾರತಮ್ಯ, ಜಾತಿ ಮುಂತಾದ ಸಾಮಾಜಿಕ ಸಮಸ್ಯೆಗಳು ಲಂಕೇಶರ ಕಥೆಗಳಲ್ಲಿ ಬದಲಾವಣೆಯ ಸ್ವರೂಪದಲ್ಲಿ ಕಾಣುತ್ತೇವೆ. ಭಾರತೀಯ ಸಮಾಜದ ಸಾಂಪ್ರದಾಯಿಕ ನೆಲೆಗಳನ್ನು ಪ್ರಶ್ನಿಸುವ ಪ್ರಯತ್ನ ಕಥೆಗಳಲ್ಲಿದೆ. ಅಂತರ್ಜಾತಿ ವಿವಾಹ ನಿಷಿದ್ಧ, ಕೆಳವರ್ಗದವರು ಮೇಲ್ವರ್ಗದವರನ್ನು ಮುಟ್ಟಬಾರದು, ಮುಟ್ಟಿದರೆ ಮೈಲಿಗೆ ಅಥವಾ ಕೆಟ್ಟದ್ದಾಗುತ್ತದೆ ಎಂಬ ಮೂಢನಂಬಿಕೆಯನ್ನು ಮುರಿದು ಸಮಾಜಕ್ಕೆ ಜಾಗೃತಿಯನ್ನು ನೀಡುವ ಪ್ರಸಂಗಗಳು ಲಂಕೇಶರ ಕಥೆಗಳಲ್ಲಿವೆ.

ಸಮಾಜದ ವರ್ಣಸಂಬಂಧಗಳ ಸಂಕೀರ್ಣ ಸ್ವರೂಪವನ್ನು ಒಂದು ರೂಪಕದ ಮಟ್ಟಕ್ಕೆ ಕೊಂಡೊಯ್ದಿರುವ ಅದ್ಭುತ ಕಥೆ ಲಂಕೇಶರ **'ಮುಟ್ಟಿಸಿಕೊಂಡವನು'**. ಈ ಕಥೆಯಲ್ಲಿಯ ಬಸಲಿಂಗ ಸಮಾಜದ ವೈಪರೀತ್ಯಗಳಿಂದಾಗಿ ತನ್ನ ಕ್ರಿಯೆಯ ಮೂಲಕವೇ ಮುಗ್ಧತೆಯನ್ನು ಮರಳಿ ದೊರಕಿಸಿಕೊಳ್ಳುತ್ತಾನೆ. ಭಾರತೀಯ ಸಮಾಜದಲ್ಲಿ ಹಾಸುಹೊಕ್ಕಾಗಿರುವ ಜಾತಿವ್ಯವಸ್ಥೆ, ಮಡಿ-ಮೈಲಿಗೆ, ಅಸ್ಪೃಶ್ಯತೆಯ ಕಾರಣಗಳಿಂದಾಗಿ ಮನುಷ್ಯ ಇಟ್ಟುಕೊಂಡಿರುವ ಸಂಕುಚಿತ ಭಾವನೆಗಳಿರುವ ವ್ಯಕ್ತಿಗಳ ವರ್ಗವೂ ಈ ಕಥೆಯಲ್ಲಿದೆ. ಮತ್ತೊಂದು ಕಡೆ ತನ್ನ ಎಲ್ಲ ಸಂಕುಚಿತ ಭಾವನೆಗಳನ್ನು ಮೀರಿ ಸುತ್ತಲಿನ ಸಮಾಜವನ್ನು ಸರಿಯಾಗಿ ಅರಿಯುವ ವ್ಯಕ್ತಿಗಳು ಇಲ್ಲಿ ಕಂಡುಬರುತ್ತಾರೆ. ಈ ಎರಡು ರೀತಿಯ ವ್ಯಕ್ತಿಗಳ ಸಂಘರ್ಷಗಳು ಕಥೆಯಲ್ಲಿವೆ. ಈ ಸಂಘರ್ಷಗಳು ಘರ್ಷಣೆಗಳಿಲ್ಲದೇ ನಡೆಯುವಂತಹವು. ಇವೆಲ್ಲವುಗಳ ನಡುವೆ ಅಲ್ಲಿನ ಅನಿಷ್ಟಗಳನ್ನು ಹೋಗಲಾಡಿಸುವ ಆಧುನಿಕ ಪ್ರಜ್ಞೆ ಜಾಗೃತಗೊಳ್ಳುವಲ್ಲಿ ಕಥೆಯೂ ಕಟ್ಟಬಯಸುವ ವ್ಯಕ್ತಿಗಳ ಹೊಸಪ್ರಜ್ಞೆ ಕೆಲಸ ಮಾಡಿದೆ. ಈ ಆಧುನಿಕ ಪ್ರಜ್ಞೆ ಬೆಳೆದು ಸರ್ವರಿಗೂ ಸುಖವಾಗುವುದು ಕಥೆಯ ಮತ್ತೊಂದು ವಿಶೇಷಾಂಶ.

ಕಥೆಯಲ್ಲಿ ಅಸ್ಪೃಶ್ಯನಾಗಿ ಡಾ. ತಿಮ್ಮಪ್ಪ ಕಂಡುಬರುತ್ತಾನೆ. ಡಾ. ತಿಮ್ಮಪ್ಪ ಸ್ಪೃಶ್ಯನಾದ ಬಸಲಿಂಗನನ್ನು ಮುಟ್ಟಿ ಅವನ ಕಣ್ಣಿನ ಆಪರೇಷನ್ ಮಾಡಿದ್ದು, ಸಮಾಜದ ವ್ಯಕ್ತಿಗಳ ಪ್ರಕಾರ ಸೂತಕ. ಏಕೆಂದರೆ ಡಾ. ತಿಮ್ಮಪ್ಪ ಹೊಲೆಯನಾದ ಕಾರಣಕ್ಕಾಗಿ ಊರಿನ ಜನರ ಸಂಕುಚಿತ ಮನಸ್ಸು ಈ ರೀತಿಯಲ್ಲಿ ಯೋಚಿಸುತ್ತಿತ್ತು. ಅಸ್ಪೃಶ್ಯತೆಯ ದುಷ್ಪರಿಣಾಮಗಳನ್ನು ಮನೋದೈಹಿಕ ಹಾಗೂ ಅದರ ಸಾಮಾಜಿಕ ಆಯಾಮಗಳನ್ನು ಕೇಂದ್ರವಾಗಿರಿಸಿಕೊಂಡ ಕಥೆಯ ನಾಯಕ ಬಸಲಿಂಗ ಹೆಂಡತಿಯ ಸಲಹೆ ಮತ್ತು ಜನರ ಮಾತುಗಳ ಕಾರಣಕ್ಕಾಗಿ ಗೊಂದಲದಲ್ಲಿ ಬೀಳುತ್ತಾನೆ. ಈತ ಆ ಕಣ್ಣನ್ನು ಕಳೆದುಕೊಳ್ಳುವಷ್ಟು ಮೌಢ್ಯದಲ್ಲಿ ಬೀಳುತ್ತಾನೆ. ಸಮಾಜದ ಯಾವುದೇ ಸಂಕುಚಿತ ಭಾವನೆಗಳಿಗೆ ಮುಗ್ಧನಾಗಿದ್ದ ಬಸಲಿಂಗ ತನ್ನ ಗೊಂದಲದ ಕಾರಣಕ್ಕಾಗಿ ಜಾತೀಯತೆಯ ಜಾಲದಲ್ಲಿ ಬಿದ್ದು ಡಾ. ತಿಮ್ಮಪ್ಪನನ್ನು ಅನುಮಾನಿಸಿ ತನ್ನ ಒಂದು ಕಣ್ಣನ್ನೇ ಸಂಪೂರ್ಣವಾಗಿ ಕಳೆದುಕೊಳ್ಳುವನು.

ತನ್ನ ಸುತ್ತ ಸಮಾಜದಲ್ಲಿ ನಡೆಯುತ್ತಿದ್ದ ಈ ಎಲ್ಲಾ ಭಾವನೆಗಳು ತಲತಲಾಂತರದಿಂದ ಬಂದವುಗಳಾದರೂ ತಿಮ್ಮಪ್ಪನಲ್ಲಿ ಪಾಪಪ್ರಜ್ಞೆ ಕಾಡುವುದಿಲ್ಲ. ಸಮಾಜದ ವಿರುದ್ಧ ಸೆಣೆಸಾಟದಲ್ಲೂ ತೊಡಗುವುದಿಲ್ಲ. ಬದಲಿಗೆ ನಿಶ್ಚಲವಾಗಿ ಕಂಗೊಳಿಸುತ್ತಾನೆ. ಪ್ರಾಮಾಣಿಕತೆ, ಪ್ರತಿಭೆ ಡಾ. ತಿಮ್ಮಪ್ಪನನ್ನು ದೊಡ್ಡ

ವ್ಯಕ್ತಿಯನ್ನಾಗಿಸುತ್ತವೆ. ಅಸ್ಪೃಶ್ಯತೆಯ ವಿರುದ್ಧ ಎಲ್ಲಿಯೂ ಧ್ವನಿಯೆತ್ತುವುದಿಲ್ಲ. ತನಗೆ ಎಷ್ಟೇ ನೋವುಂಟುಮಾಡಿದರೂ ಬಸಲಿಂಗನು ಪಶ್ಚಾತಾಪದಿಂದ ದೀನನಾಗಿ ವಿಧಿಯಿಲ್ಲದೆ ತಿಮ್ಮಪ್ಪನ ಬಳಿಗೆ ಬಂದಾಗ ತಿಮ್ಮಪ್ಪ ಅಭಯ ಹಸ್ತ ನೀಡುತ್ತಾನೆ. ಬಸಲಿಂಗ ತಿಮ್ಮಪ್ಪನನ್ನು ಮುಟ್ಟಿ ಗಟ್ಟಿಯಾಗಿ ಅತ್ತಾಗ ಆತನನ್ನು ಸಮಾಧಾನಪಡಿಸಿ ಮತ್ತೊಂದು ಕಣ್ಣಿನ ಬೇನೆಯನ್ನು ಪರೀಕ್ಷಿಸುತ್ತಾನೆ. ಅಂದರೆ ಜಾತೀಯತೆಗೆ ಮಾನವೀಯ ಮೌಲ್ಯಗಳು ಮುಖಾಮುಖಿಯಾಗುವುದನ್ನು ಈ ಕಥೆಯಲ್ಲಿ ಕಾಣಬಹುದು. ಲಂಕೇಶರ ಕಥೆಗಳಲ್ಲಿ ವ್ಯಕ್ತಿಗಳು ಕಾಣುವ ಹೊಸ ಕನಸಿಗೆ ಇದು ಚೌಕಟ್ಟನ್ನು ಒದಗಿಸಿಕೊಡುತ್ತದೆ. ಕಥೆಗಳು ಕಟ್ಟುವ ಹೊಸ ಸಮಾಜದ ಒಂದು ಪ್ರಬಲ ಮಾದರಿ ಇಲ್ಲಿದೆ. ಕಥೆಯ ಶೀರ್ಷಿಕೆಯೇ ಬದಲಾದ ಸನ್ನಿವೇಶವನ್ನು ವ್ಯಕ್ತಪಡಿಸುತ್ತದೆ. ತನ್ನ ಜಾತಿಯ ಯಾವ ವೈದ್ಯರೂ ತನ್ನ ಕಣ್ಣಿನ ಬೇನೆಯನ್ನು ಗುಣಪಡಿಸಲು ಸಾಧ್ಯವಿಲ್ಲ ಎಂಬುದನ್ನು ಅರಿತ ಬಸಲಿಂಗನ ದೃಢನಿರ್ಧಾರದಲ್ಲಿ ಜಾತೀಯತೆಯ ವಿಷಬೀಜವನ್ನು ಬೇರುಸಮೇತ ಕಿತ್ತೆಸೆಯುವ ಮನಸ್ಸು ಮೂಡುತ್ತಾನೆ. ತನ್ನ ಹೆಂಡತಿ, ಮಠದ ಗುರುಗಳ ಹಿತನುಡಿಗಳು ಮನಸ್ಸಿಗೆ ಅಸಮಾಧಾನವನ್ನು ತಂದುಕೊಡುತ್ತವೆ. ಹೀಗೆ ಸುಳ್ಳುಗಳಿಂದ ಮುಕ್ತವಾಗುವ ಬಸಲಿಂಗನಿಗೆ ಜ್ಞಾನೋದಯವಾಗುತ್ತದೆ. ಚಿಕ್ಕ ಮಗುವಿನಂತೆ ಡಾ. ತಿಮ್ಮಪ್ಪನ ಬಳಿಗೆ ಬರುವುದು ಬಸಲಿಂಗನ ಬದಲಾದ ವ್ಯಕ್ತಿತ್ವವನ್ನು ತೋರಿಸುತ್ತದೆ.

'ಪರಿವರ್ತನೆ' ಎಂಬುದು ಸಮಾಜದ ನಿಯಮ. ಜಗತ್ತು ಬದಲಾಗಬೇಕಾದರೆ ವ್ಯಕ್ತಿಗಳು ಬದಲಾಗಬೇಕು, ಮನಸ್ಥಿತಿಗಳು ಬದಲಾಗಬೇಕು. ಇಂತಹ ಅಂಶ 'ಮುಟ್ಟಿಸಿಕೊಂಡವನು' ಕಥೆಯಲ್ಲಿ ಸಾಕಾರಗೊಂಡಿದೆ. ಕಥೆಯಲ್ಲಿ ಅಂತರಂಗದ ಮನನ ಹೃದಯಸ್ಪರ್ಶಿ ಸನ್ನಿವೇಶವನ್ನು ಸೃಷ್ಟಿಸಿದೆ. ಬಸಲಿಂಗನ ಪ್ರಾಯಶ್ಚಿತ್ತ ಅಥವಾ ವಿಷಾಧದ ಛಾಯೆ, ಡಾ. ತಿಮ್ಮಪ್ಪನ ಕರ್ತವ್ಯನಿಷ್ಠೆ ಕಣ್ಣಿನಲ್ಲಿ ಅಚ್ಚಳಿಯದೆ ಉಳಿಯುತ್ತದೆ. ಒಟ್ಟಾರೆ ವ್ಯಕ್ತಿಗಳ ಪರಸ್ಪರ ಅಂತರಂಗದ ಶೋಧದ ಮೂಲಕ ಸಾಮಾಜಿಕ ತಿಳುವಳಿಕೆ ಮತ್ತು ಸುಧಾರಣೆಯ ಆಶಯವನ್ನು ಹೊತ್ತಿರುವ ಈ ಕಥೆ ಪ್ರಸ್ತುತ ಅಧ್ಯಾಯಕ್ಕೆ ಬೇಕಾದ ಸನ್ನಿವೇಶಗಳನ್ನು ಒದಗಿಸಿಕೊಡುತ್ತದೆ.

## ೪.೩ ಮಹಿಳೆಯರಿಗಾಗಿ ಪ್ರಾಮುಖ್ಯತೆ ನೀಡುವ ಸಮಾಜ :

ಪಿತೃಪ್ರಧಾನ ಮೌಲ್ಯಗಳಲ್ಲಿ ಲಿಂಗತಾರತಮ್ಯವು ಪ್ರಮುಖವಾಗಿ ಕಂಡುಬರುವಂತಹ ಪಿಡುಗು. ನವ್ಯಸಾಹಿತ್ಯದ ಕಾಲಘಟ್ಟವೂ ಸಹ ಇದರಿಂದ ಹೊರತಾದುದ್ದಲ್ಲ, ನವ್ಯದ ಹಿನ್ನೆಲೆಯಲ್ಲಿ ಮಹಿಳಾ ಪಾತ್ರಗಳು ಪುರುಷ ಪಾತ್ರಗಳ ಲೈಂಗಿಕತೆಯನ್ನು ಹೈಲೈಟ್ ಮಾಡುವ ಉದ್ದೇಶದಿಂದಲೇ ಹೆಚ್ಚಾಗಿ ಕಂಡುಬರುತ್ತವೆ. ನವ್ಯ ಸಾಹಿತ್ಯ ಪ್ರಕಾರದ ಮುಖ್ಯ ಕೃತಿಗಳಲ್ಲಿ ಒಂದಾದ 'ಸಂಸ್ಕಾರ' ಕಾದಂಬರಿಯಲ್ಲಿ ಬರುವ ಚಂದ್ರಿಯೂ ಪುರುಷ ಪಾತ್ರಗಳಾದ ಪ್ರಾಣೇಶಚಾರಿ ಮತ್ತು ನಾರಾಣಪ್ಪನ ಲೈಂಗಿಕತೆಯನ್ನು ಮಾತ್ರ ಹೈಲೈಟ್ ಮಾಡುವ ಉದ್ದೇಶದಿಂದ ಮುಖ್ಯವಾಗಿ ಬರುತ್ತಾಳೆ. ಇದಲ್ಲದೇ ಚಂದ್ರಿಯ ಪಾತ್ರಕ್ಕೆ ಹೆಚ್ಚಿನ ಪ್ರಾಶಸ್ತ್ಯವೇನು ಇರುವುದಿಲ್ಲ. ಹಾಗೆಯೇ 'ಮೂರು ದಾರಿಗಳು' ಕಾದಂಬರಿಯ ನಿರ್ಮಲೆಯು ಸಹ ಸ್ಟುಡಿಯೋ ರಂಗಪ್ಪನ ಲೈಂಗಿಕತೆಯನ್ನು ಮತ್ತು ಅವಳ ತಂದೆಯ ಪಿತೃಪ್ರಧಾನ ಮೌಲ್ಯಗಳನ್ನು ಹೈಲೈಟ್ ಮಾಡುವ ಒಂದು ಸಾಧನವಾಗಿ ಕಾಣಿಸಿಕೊಳ್ಳುತ್ತಾಳೆ. ಲಂಕೇಶರ ಕಥೆಗಳಲ್ಲಿ ಬರುವಂತಹ ಸ್ತ್ರೀ ಪಾತ್ರಗಳು ಇದಕ್ಕೆ ಹೊರತಾದವರಲ್ಲ. ಆದರೆ ಲಂಕೇಶ್ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳಿಗೆ ಅಲ್ಲಲ್ಲಿ ವೈಯಕ್ತಿಕತೆಯಿದೆ. ಅವು ಕೇವಲ ಪುರುಷ ಪಾತ್ರಗಳ ಹಿಮ್ಮೇಳವಾಗಿ ಮೂಡಿಬರುವುದಿಲ್ಲ.

**'ಉರಿದ ಊರಿನವರು'** ಕಥೆಯಲ್ಲಿ ಬರುವ ದಟ್ಟವಾದ ಹಿಂಸೆಯ ನಡುವೆಯೂ ಅಧೀರವಾಗದೆ ಬದುಕನ್ನು ಪ್ರೀತಿಸುವ ಚೆಲುವಮ್ಮ ದಿಟ್ಟತನದ ದ್ಯೋತಕವಾಗಿ ಇಡೀ ಕಥೆಯ ಕೇಂದ್ರವಾಗಿ ಕಂಡುಬರುತ್ತಾಳೆ. ಈ ಸ್ತ್ರೀಪಾತ್ರವನ್ನು ಹೈಲೈಟ್ ಮಾಡುವುದಕ್ಕಾಗಿ ಉಳಿದ ಪಾತ್ರಗಳು ಕಥೆಯಲ್ಲಿ ಕಾಣಿಸಿಕೊಳ್ಳುತ್ತದೆ. ಗಂಡು ದಿಕ್ಕಿಲ್ಲದ ತನ್ನ ಮನೆ, ತಂಗಿ ಗಿರಿಜ, ಮಗ ಕುಮಾರನನ್ನು ಕಾಯಲು ಕನಿಷ್ಟ ಪ್ರಾಮಾಣಿಕ ಪ್ರಯತ್ನವನ್ನು ಕಥೆಯುದ್ದಕ್ಕೂ ಚೆಲುವಮ್ಮ ಮಾಡುತ್ತಾಳೆ, ಸ್ತ್ರೀಪ್ರಧಾನ ಕುಟುಂಬವೊಂದನ್ನು ಹಿಂಸಿಸುವ ಕಥಾಕ್ಷೇತ್ರವಾಗಿ ಬೈಲಳ್ಳಿ ಕಂಡುಬಂದರೂ, ದಿಟ್ಟ ಹೆಣ್ಣಾಗಿ ಚೆಲುವಮ್ಮ ಬೈಲಳ್ಳಿಯನ್ನು ಎದುರಿಸುತ್ತಾಳೆ. ಬೈಲಳ್ಳಿ ಎಂಬ ಗ್ರಾಮ ಸಮಾಜಕ್ಕೆ ಪಟ್ಟಣದ ಸಂಪರ್ಕದಿಂದ ಬದಲಾವಣೆಯ ಪ್ರಕ್ರಿಯೇ ಆವರಿಸಿದಾಗ ಕ್ರಮೇಣ ಬಡತನ, ನಿರುದ್ಯೋಗ, ರಾಜಕೀಯ, ಪುಂಡಾಟಿಕೆ, ಕುಡಿತ, ಹಾದರ ಎಲ್ಲವೂ ಬೆಳೆಯುತ್ತದೆ. ಈ ಎಲ್ಲವುಗಳಿಂದ ಲಾಭ ಪಡೆಯುವ ಬೈರಪ್ಪ ಮೇಷ್ಟ್ರರಂತಹವರೂ ಇಲ್ಲಿ ಹುಟ್ಟಿಕೊಳ್ಳುತ್ತಾರೆ. ಇದರ ನಡುವೆ ತಮಗರಿವಿಲ್ಲದಂತೆಯೇ ಪ್ರೇಮ, ಪ್ರೀತಿಯ ಕಾವಿನಲ್ಲಿ ಸಾಮಾಜಿಕ ಕಟ್ಟಳೆಗಳನ್ನು ಮುರಿದು ಹೊಸ ಬದುಕಿಗಾಗಿ ಹಂಬಲಿಸುವ ಯುವಜನರೂ ಇದ್ದಾರೆ.

ಇಂತಹ ವ್ಯಕ್ತಿಗಳು ಎರುವ ಹಿಂಸೆಯನ್ನು ಪೊರೆಯುವ ದಿಟ್ಟಹೆಣ್ಣಾಗಿ ಚೆಲುವಮ್ಮ ಕಾಣಿಸಿಕೊಳ್ಳುತ್ತಾಳೆ. ಚೆಲುವಮ್ಮನ ಹೋರಟ, ಹಠಮಾರಿತನ, ಅಸಾಹಯಕತೆಯ ಹಿಂದೆ ಬದುಕುವ ಹಂಬಲವಿದೆ. ಕಥೆಯ ಕೊನೆಯವರೆಗೂ ಚೆಲುವಮ್ಮ ಬಹಳ ಗಟ್ಟಿತನದ ಪಾತ್ರವಾಗಿ ಕಂಡುಬರುತ್ತಾಳೆ. ಕಥೆಯ ಕೊನೆಗೆ ಚೆಲುವಮ್ಮನ ಮನೆಗೆ ಬೆಂಕಿ ಬೀಳುವ ಪ್ರಸಂಗ ಧಾರುಣವಾಗಿದೆ. ಯಾರ ಸಹಾಯ, ಸಹಕಾರವೂ ಇಲ್ಲದೇ ಇಡೀ ಪುರುಷ ಪ್ರಧಾನ ಸಮಾಜದ ವಿರುದ್ಧ ಹೋರಾಟಕ್ಕೆ ನಿಂತಿದ್ದ ಚೆಲುವಮ್ಮ ಊರನ್ನು ನಡುಗಿಸಿದ್ದಳು. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಸಂಚಿಗೆ ಬಲಿಯಾಗಿ ಉರಿದು ಬೂದಿಯಾಗುತ್ತಾಳೆ. ಪಿತೃಪ್ರಧಾನ ಮೌಲ್ಯಗಳ ಚೌಕಟ್ಟಿನಲ್ಲಿ ಮಹಿಳೆಯ ದಿಟ್ಟತನಕ್ಕಾಗಲಿ, ವ್ಯಕ್ತಿನಿಷ್ಟ ನಡವಳಿಕೆಗಾಗಲಿ ಯಾವುದೇ ಸ್ಥಾನ ಇರುವುದಿಲ್ಲ. ಆದ್ದರಿಂದ ಪುರುಷನ ವಿದ್ವಂಸಕ ಕೃತ್ಯವು ಮಹಿಳೆಯ ದಿಟ್ಟತನವನ್ನು ನಾಶ ಮಾಡುವುದಕ್ಕೆ ಸದಾ ಮುಂದಾಗಿರುತ್ತದೆ.

**'ಉಲ್ಲಂಘನೆ'** ಕಥೆಯಲ್ಲಿ ಬರುವ ಕೃಷ್ಣಸ್ವಾಮಿ ಹೆಂಡತಿ ಗಿರಿಜಮ್ಮ ನಾಗನ ಸ್ನೇಹಿತೆ ಸೀತ ಅಸಾಯಕರಾಗಿ ಕಂಡುಬರುವುದಿಲ್ಲ. ಇಲ್ಲಿಯೂ ಪಿತೃಪ್ರಧಾನ ಮೌಲ್ಯಗಳ ಚೌಕಟ್ಟಿನಲ್ಲಿ ಮಹಿಳೆಯರ ದಿಟ್ಟತನ ಕೆಲಸ ಮಾಡಿದೆ.

**'ದೇವಿ'** ಕಥೆಯಲ್ಲಿ ಬರುವ ಅವಿದ್ಯಾವಂತ ಆದರೆ ಚಾಣಾಕ್ಷತನದ ದೇವಿ ಬದುಕಿದ್ದ ಸಮಾಜ ಪಿತೃಪ್ರಧಾನ ಮೌಲ್ಯಗಳಿರುವ ಸಮಾಜ. ಆದರೆ ನಿರ್ಧಾರ ನಿಲುವುಗಳನ್ನು ತೆಗೆದುಕೊಳ್ಳುವುದರಲ್ಲಿ ದೇವಿ ಸ್ವಾತಂತ್ರಳಾಗಿರುತ್ತಾಳೆ. ಹೆಣ್ಣು ಹುಟ್ಟುವಾಗ ತಂದೆಯ ಆಶ್ರಯ, ಬೆಳೆದು ಪ್ರೌಢಳಾದಾಗ ಗಂಡನ ಆಶ್ರಯ, ಮುಪ್ಪಿನಲ್ಲಿ ಮಗನ ಆಶ್ರಯದಲ್ಲಿ ಇರಬೇಕು ಎಂಬ ಸಮಾಜದ ಪಾರಂಪರಿಕ ಮೌಲ್ಯವನ್ನು ಮೀರುವ ಸಾಹಸ ದೇವಿ ತೋರುತ್ತಾಳೆ. ದೇವಿಯ ಈ ಸ್ವಭಾವ ಚೆಲುವಮ್ಮ ಮಾಡಿದ ಹೋರಾಟದಷ್ಟು ಉಗ್ರ ಸ್ವರೂಪ ತಾಳದೆ ಬೂದಿ ಮುಚ್ಚಿದ ಕೆಂಡದ ತರಹ ವಿಕೋಪದ ಹಂತಕ್ಕೆ ತೆರಳುವುದಿಲ್ಲ. ಇವಳ ನಿಲುವು ಸಾಂಪ್ರದಾಯಿಕ ಸ್ತ್ರೀಪಾತ್ರಗಳ ನಿಲುವಿಗಿಂತ ಭಿನ್ನವಾಗಿ ಮೂಡಿಬಂದಿರುವುದೇ ಈ ಕಥೆಯ ವೈಶಿಷ್ಟ್ಯವಾಗಿದೆ.

**'ಕಲ್ಲು ಕರಗುವ ಸಮಯ'**ದ ಶ್ಯಾಮಲ–ತಿಪ್ಪಣ್ಣ ಇವರಿಬ್ಬರ ಪ್ರೇಮ ಪ್ರಸಂಗ. ಸಮಾಜದ ಜಾತಿ, ಧರ್ಮ, ಮತಗಳನ್ನು ಮೀರುವ ಪ್ರಯತ್ನಕ್ಕೆ ಮುಂದಾಗಿದೆ. ಇವರಿಬ್ಬರು ಇಡೀ ಊರಿನ ಸಂಪ್ರದಾಯವನ್ನೆ ಪರಿವರ್ತಿಸುತ್ತಾರೆ.

"ಅದೊಂದು ವೀರಾವೇಶದ ಮಾರಾಮಾರಿಯ ಊರು. ಹೆಂಡತಿ ವ್ಯಭಿಚಾರ ಮಾಡಿದರೆ ಗಂಡನ ವಾದವಾಗಲಿ, ಗುಪ್ತವಾಗಿ ವ್ಯಸನ ಪಡುವುದಾಗಲಿ ಆ ಊರಲ್ಲಿ ಇರಲಿಲ್ಲ. ವ್ಯಭಿಚಾರ ಮಾಡಿದವಳು ಮತ್ತು ಆಕೆಯ ಪ್ರಿಯಕರ ಇಬ್ಬರ ಕೊಲೆಯೂ ಒಂದೇ ಘಳಿಗೆಯಲ್ಲಿ ಆಗುತ್ತಿತ್ತು. ಕೊಟ್ಟ ಹಣ ಹಿಂದಿರುಗಿಸದೆ ಇದ್ದರೆ ಕೂಡ. ಕಂಬಕ್ಕೆ ಕಟ್ಟಿ ಹೊಡೆದು ಜೀತ ಮಾಡಿಸುವುದು ಸಂಪ್ರದಾಯ ಕುಟುಂಬಗಳ ಜಿದ್ದು ಹಾಗೆಯೇ. ಎರಡರಲ್ಲಿ ಒಂದು ಕುಟುಂಬ ಧಪನ್ ಆದಂತೆಯೇ ಪಂಚಾಯಿತಿಗಳೆಂದರೆ ತಪ್ಪು ಮಾಡಿದವರನ್ನು ಬೆಂಕಿಗೆ ಇಕ್ಕುವ ಸಂದರ್ಭಗಳು."[೩೨]

ಇಂತಹ ಊರಾದ ಅಮೃತಾಂಬುಧಿಯಲ್ಲಿ ಹುಟ್ಟಿ ಬೆಳೆದ ಶ್ಯಾಮಲ ತನ್ನ ನೇರನುಡಿಯ ಸ್ವಭಾವದಿಂದ, ಪ್ರಗತಿಪರ ಯೋಚನೆಯಿಂದ ಊರಲ್ಲಿದ್ದ ಸಾಂಪ್ರದಾಯಿಕ ಮನಸ್ಸುಗಳನ್ನು ಪರಿವರ್ತಿಸುತ್ತಾಳೆ. ಆಗ ತಾನೆ ಕಾಲೇಜು ಮೆಟ್ಟಿಲು ಹತ್ತಿದ್ದ ಶ್ಯಾಮಲ ಜಾತಿ, ಧರ್ಮ ಮತಗಳನ್ನು ಮೀರಿ ಸ್ನೇಹಮಯೀ ವ್ಯಕ್ತಿಯೊಬ್ಬನನ್ನು ಪ್ರೀತಿಸುತ್ತಾಳೆ. ತನ್ನ ಛಲ, ದಿಟ್ಟತನದಿಂದ ಪ್ರೀತಿಸಿದವನನ್ನು ಧಕ್ಕಿಸಿಕೊಳ್ಳುತ್ತಾಳೆ. ಅಮೃತಾಂಬುಧಿ ಸಮಾಜದ ನಡವಳಿಕೆಗಳನ್ನೆ ಬದಲಾಯಿಸುವುದರ ಮೂಲಕ ಹೊಸ ಸಮಾಜ ಸೃಷ್ಟಿಗೆ ಪ್ರತಿಮೆಯಾಗಿ ಶ್ಯಾಮಲ ಕಂಡುಬರುತ್ತಾಳೆ.

ಇಂತಹ ಅಂತರ್ಜಾತಿಯ ಪ್ರೇಮಪ್ರಕರಣಗಳಲ್ಲಿ ಹಲವು ಕೊಲೆಗಳೇ ನಡೆದಿದ್ದ ಇತಿಹಾಸವಿರುವ ಊರಿಗೆ ಶ್ಯಾಮಲ ಕಥೆಯಾಗಿದ್ದಳು. ಇದು ಕೇವಲ ಜಾತಿಯ ಪ್ರಶ್ನೆಯಲ್ಲ. ಬೇಡರ ಹುಡುಗನ್ನೊಬ್ಬ ಲಿಂಗಾಯಿತರ ಮನೆಯಲ್ಲಿ ಉಣ್ಣುವ, ಮಲಗುವ ಪ್ರಶ್ನೆ, ಶ್ಯಾಮಲ ತಿಪ್ಪಣ್ಣನ ಪ್ರೇಮದ ವಿಷಯ ಕಿವಿಗೆ ಬಿದ್ದೊಡನೆ ಮಲ್ಲಯ್ಯ ರಾಕ್ಷಸನಂತೆ ಸಿಟ್ಟುಕೊಂಡಿದ್ದು ಈ ಸಲುವಾಗಿಯೇ . ಆದರೆ ಸರಳತೆ, ದೀನತೆ, ಸಹಜತೆಯ ಮಾನವಮೂರ್ತಿಯಾಗಿದ್ದ ತಿಪ್ಪಣ್ಣನ್ನು ಕಂಡು ಮಲ್ಲಯ್ಯನ ಆರ್ಭಟಗಳು ಕರಗಿಹೋದವು. ಮಲ್ಲಯ್ಯನಲ್ಲಿ ಬದುಕಿನ ಬಗ್ಗೆ ಮರುಚಿಂತನೆ ಆರಂಭವಾಗಿ ಸಮಸ್ಯೆಗಳಿಗೆ ಬೇರೆ ಬೇರೆ ರೀತಿಯ ಪರಿಹಾರ ಹುಡುಕಲು ಮುಂದಾಗುತ್ತಾನೆ. ಈ ಸನ್ನಿವೇಶಗಳು ಸಮಾಜದಲ್ಲಿರುವ ಸಂಪ್ರದಾಯಸ್ಥ ಮನಸ್ಥಿತಿಗಳನ್ನು ಪರಿವರ್ತಿಸುವ ಸಂದರ್ಭಗಳಿಗೆ ಸಾಕ್ಷಿಯಾಗಿವೆ.

---

[೩೨] ಲಂಕೇಶ್, ಪಿ., "ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು", ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೮೮–೧೧೫.

"ತನ್ನನ್ನು ಹೆತ್ತ ತಂದೆ ನೇರ, ಕಠೋರ ಮನುಷ್ಯ. ಬಂಡೆಯ ಸಂದಿಯಲ್ಲಿ ಮರ ಬೇರು ಬಿಟ್ಟಂತೆ, ಬೇರು ಬಿಟ್ಟು ಬಂಡೆಯನ್ನು ಒಡೆದಂತೆ; ಎಳೆಯ ಹಣ್ಣಿನಲ್ಲಿ ಹೊಸ ಜೀವ ಮೊಳೆತಂತೆ, ಮೊಳೆತು ಅವಳನ್ನು ಅಲ್ಲಾಡಿಸಿದಂತೆ ಅಥವಾ ಪರಂಪರಾಗತ ಬದುಕಿನಲಿ ಮುಳುಗಿದವ, ಎಲ್ಲ ಜಟಿಲವಾದ ಆಚಾರಗಳಲ್ಲಿ ಬಂಧಿಸಲ್ಪಟ್ಟವ. ಒಂದು ದಿನ ಪೂರ್ಣ ನೀಲಿ ಆಕಾಶ, ಬೆಳ್ಳಕ್ಕಿಗಳ ಹಿಂಡು, ಅದರೊಂದಿಗೆ ಅನಂತತೆಯ ಕಾಣ್ಕೆ ಕಂಡಂತೆ

ಈ ಸಲ ತಿಪ್ಪಣ್ಣ ತನ್ನ ತಂದೆಯನ್ನು ನೋಡುವಂತೆಯೇ ನೋಡಿದ. ಅವನ ಕೈ ಶ್ಯಾಮಲಾಳ ಹಸ್ತಕ್ಕಾಗಿ ಕಾತರಿಸಿತು. ಶ್ಯಾಮಲ ಅವನ ಇಡೀ ತೋಳನ್ನು ಅಪ್ಪಿ ನಿಂತಳು.

ಮಲ್ಲಯ್ಯ ಹಾಗೇ ತಲೆತಗ್ಗಿಸಿ ಕೂತಿದ್ದ."[೪೩]

ಈ ಸಾಲುಗಳು ಮಲ್ಲಯ್ಯನಲ್ಲಿರುವ ಸಾಂಪ್ರದಾಯಿಕ ಮನಸ್ಥಿತಿ ಮತ್ತು ಅದು ಬದಲಾದ ಅಂಶಗಳು ಗೋಚರಿಸುತ್ತವೆ. ಹೀಗೆ ಲಂಕೇಶರ ಕಥೆಗಳಲ್ಲಿ ಕಟ್ಟುವ ಸಮಾಜದ ಹೆಣ್ಣುಗಳು ಪಿತೃಪ್ರಧಾನ ಮೌಲ್ಯಗಳ ಚೌಕಟ್ಟಿನೊಳಗೆ ಇದ್ದರೂ ಸಹ ಆ ಚೌಕಟ್ಟನ್ನು ಮೀರುವಂತಹ ಪ್ರಯತ್ನಗಳನ್ನು ಮಾಡುತ್ತಿದ್ದಾರೇನೋ ಅನ್ನಿಸುವಷ್ಟು ಮಟ್ಟಿಗೆ ತಮ್ಮದೇ ಆದ ವೈಶಿಷ್ಟ್ಯತೆಯನ್ನು ಮೆರೆಸುತ್ತಾರೆ.

ಸ್ಟೆಲ್ಲಾ ಎಂಬ ಹುಡುಗಿಯು ಬದುಕಿದ್ದ ಸಮಾಜ ಸಾಂಪ್ರದಾಯಿಕ ಸಮಾಜವಾದರೂ, ಅವಳು ಬದುಕಲು ಬಯಸುವ ಸಮಾಜ ಆಧುನಿಕ ಸಮಾಜವಾಗಿದೆ. ಆಧುನಿಕ ಸಮಾಜದ ಕನಸು ಕಾಣಲು 'ಸ್ಟೆಲ್ಲಾ ಎಂಬ ಹುಡುಗಿ'; ಕಥೆಯಲ್ಲಿ ಹಳೆತಲೆಮಾರಿನ ವ್ಯಕ್ತಿಯಾದ ಸುಬ್ಬಣ್ಣ ಮತ್ತು ಹೊಸ ತಲೆಮಾರಿನ ವ್ಯಕ್ತಿಗಳಾದ ಸ್ಟೆಲ್ಲಾ, ಸುರೇಶ, ಸಾವಿತ್ರಿ, ಸ್ಮಿಥ್, ಫ್ರಾನ್ಸಿಸ್ ತುದಿಗಾಲಲ್ಲಿ ನಿಂತಿದ್ದಾರೆ. ಈ ಕಥೆಯಲ್ಲಿ ಜಾತಿ, ವರ್ಗದ ಪ್ರಶ್ನೆ ಬರುವುದಿಲ್ಲ. ಸ್ತ್ರೀ ಸಮಾನತೆಯ ನೆಲೆಯಲ್ಲಿ ಘರ್ಷಣೆಗಳಾಗುವುದಿಲ್ಲ. ಅಂಜಿಕೆ, ಗೊಂದಲದಲ್ಲಿ ಜೀವಿಸುವ ಸ್ಟೆಲ್ಲಾ ಕಥೆಯ ಕೊನೆಗೆ ಫ್ರಾನ್ಸಿಸ್ ಜೊತೆ ಹೋಗಲು ತೆಗೆದುಕೊಳ್ಳುವ ನಿರ್ಧಾರವು ಸಂಪ್ರದಾಯ ಸಮಾಜದ ನಿಯಮಗಳನ್ನು ಮೀರುವಂತೆ ಕಾಣುತ್ತದೆ. ಆದರೆ ಕಥೆಯನ್ನು ಮುಂದುವರೆದು ಸೂಕ್ಷ್ಮವಾಗಿ ನೋಡಿದಾಗ ಅವಳ ಗಂಡನಾದ ಸ್ಮಿಥ್ ಬ್ಯಾಂಕಿನಲ್ಲಿ ಫ್ರಾನ್ಸಿಸ್‌ನಿಂದ ಹಣಸಿಗುತ್ತದೆ ಎಂಬ ಕಾರಣಕ್ಕಾಗಿ ಇವರಿಬ್ಬರ ಸಂಬಂಧಕ್ಕೆ ಒಪ್ಪಿಗೆ ಸೂಚಿಸುವುದು ಗೋಚರಿಸುತ್ತದೆ. ಸ್ಮಿಥ್‌ನು ತನ್ನ

---

[೪೩] ಲಂಕೇಶ್, ಪಿ., "ಕಲ್ಲು ಕರಗುವ ಸಮಯ ಮತ್ತು ಇತರೆ ಕಥೆಗಳು", ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೮೮–೧೦೫.

ಅನುಕೂಲಕ್ಕಾಗಿ ಇವರಿಬ್ಬರ ಸಂಬಂಧವನ್ನು ಬಳಸಿಕೊಂಡಿರುವುದನ್ನು ಇಲ್ಲಿ ಸ್ಪಷ್ಟವಾಗಿ ಕಾಣಬಹುದು. ಆದ್ದರಿಂದ ಸ್ಟೆಲ್ಲಾಳಂತಹ ಪಾತ್ರಕ್ಕೆ ಕಥೆಯಲ್ಲಿ ಪ್ರಾಮುಖ್ಯತೆ ಕಂಡುಬಂದರೂ ಸಹ ಈ ಪಾತ್ರವು ಪಿತೃಪ್ರಧಾನ ಮೌಲ್ಯದ ಚೌಕಟ್ಟಿನೊಳಗೆ ರೂಪಿತವಾಗಿರುವಂತಹದ್ದು. ಇಲ್ಲಿ ಹೊಸ ಜನಾಂಗದ ಲೌಕಿಕ ಯಶಸ್ಸು ಈ ಕಥೆಯ ಆಕರ್ಷಕ ಅಂಶ. ಪ್ರಗತಿಶೀಲ ಧೋರಣೆಗಳ ಪ್ರಭಾವ ಹೊಸ ಜನಾಂಗದ ಮೇಲೆ ಆಗಿರುವುದು ಇಲ್ಲಿನ ಪಾತ್ರಗಳ ಮೂಲಕ ತಿಳಿಯುತ್ತದೆ.

ನಗರ ಸಂಸ್ಕೃತಿಯ ವಾತವರಣದಲ್ಲಿ ಬದುಕಿದ ಸ್ಟೆಲ್ಲಾ, ಸ್ಮಿಥ್, ಫ್ರಾನ್ಸಿಸ್ ಬದುಕನ್ನು ತುಂಬಾ ಪ್ರಾಕ್ಟಿಕಲ್ ಆಗಿ ತೆಗೆದುಕೊಳ್ಳುವರು. ಇವರೆಲ್ಲರಿಗೂ ಬದುಕುವ ಹಂಬಲವಿದೆ. ಬದುಕಲು ಏನನ್ನಾದರು ಮಾಡಲು ಮುಂದಾಗುತ್ತಾರೆ. ಸಮಾಜದ ಕಟ್ಟುಕಟ್ಟಲೆಗಳನ್ನು ಮೀರಲು ಮುಂದಾಗುತ್ತಾರೆ. ಸ್ಟೆಲ್ಲಾ ತನ್ನ ಪತಿ ಸ್ಮಿಥ್‌ನನ್ನು ನಿರ್ಲಕ್ಷಿಸಿ, ಫ್ರಾನ್ಸಿಸ್‌ನನ್ನು ಇಷ್ಟಪಡುವುದು, ಸಂಪ್ರದಾಯ ವಿರೋಧಿ ಚಟುವಟಿಕೆಯಾದರೂ ಇಂತಹ ದೃಢ ನಿರ್ಧಾರ ತೆಗೆದುಕೊಳ್ಳುವಳು. ಕುಡುಕ ಸ್ಮಿಥ್ ತಾನು ದುಡಿಮೆಯಿಲ್ಲದೇ ಕಾಲ ಕಳೆಯುತ್ತಿರುತ್ತಾನೆ. ಇಂತಹ ವ್ಯಕ್ತಿಯೊಂದಿಗೆ ಸಂಸಾರ ನಡೆಸಲು ಕಷ್ಟ ಎಂದವಳು ಸಾಮಾಜಿಕ ಚೌಕಟ್ಟನ್ನು ಮೀರಿ ಫ್ರಾನ್ಸಿಸ್‌ನನ್ನು ವರಿಸುವ ನಿರ್ಧಾರ ಮಾಡುವಳು.

ಸ್ಮಿಥ್ ಸಹ ಹೆಂಡತಿಯ ವಿರುದ್ಧ ಮಾತನಾಡದೇ ಮೌನಿಯಾಗುತ್ತಾನೆ. "ನಿನ್ನ ಜಮೀನಿನ ಬಗ್ಗೆ ಮಾತಾಡೋಣ. ಅದನ್ನ ಮಾರಿ ಫ್ರಾನ್ಸಿಸ್ ಅವರ ಬ್ಯಾಂಕಿನಿಂದ ಸ್ವಲ್ಪ ಸಾಲ ತಗಂಡ್ರೆ ಗ್ಯಾರೇಜ್ ಕೆಲಸ ಈಸಿ ಆಗುತ್ತೆ"[೪೪] ಎನ್ನುವಲ್ಲಿ ಭೂಮಿಗಾಗಿ, ಹಣಕ್ಕಾಗಿ ಯಾವುದೇ ಹೊಂದಾಣಿಕೆ, ಅವಮಾನಕ್ಕಾದರೂ ಸಿದ್ಧವಾಗಿರುವ ಸ್ಮಿಥ್‌ನ ಬದುಕಿನ ಸಹಜ ಮತ್ತು ಅನಿವಾರ್ಯ ಸ್ಥಿತಿಯನ್ನು ತೋರಿಸುತ್ತದೆ. ಒಟ್ಟಾರೆ ತನ್ನ ದೈಹಿಕ ಕಾಮನೆಗಳನ್ನು ಈಡೇರಿಸಿಕೊಳ್ಳಲು ಅಪಾಯಕಾರಿ ಎಂದು ತಿಳಿದಿದ್ದರೂ ಸಹಿಸಿಕೊಳ್ಳುವ ಸ್ಟೆಲ್ಲಾ ಬದುಕನ್ನು ಸಾಗಿಸಲು ತನ್ನ ಹೆಂಡತಿಯನ್ನೇ ಫ್ರಾನ್ಸಿಸ್‌ಗೆ ಬಿಟ್ಟುಕೊಡಲು ಸಿದ್ಧವಾಗಿರುವ ಸ್ಮಿಥ್ ಇಂತಹ ಪಾತ್ರ ಚಿತ್ರಣಗಳು ಸಾಂಪ್ರದಾಯಿಕವಾದುವುಗಳಲ್ಲ, ನವ್ಯ ಕಾಲಘಟ್ಟದಲ್ಲಿ ಸಾಂಪ್ರದಾಯಿಕತೆಯನ್ನು ಮೀರುವ ಪ್ರಯತ್ನಗಳಿಗೆ ದ್ಯೋತಕವಾಗಿ ಈ ಪಾತ್ರಗಳು ಬರುತ್ತವೆ.

---

[೪೪] ಲಂಕೇಶ್, ಪಿ., "ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು", ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭.

ಒಟ್ಟಾರೆ ಈ ಕಥೆಯಲ್ಲಿ ವ್ಯಕ್ತಿಗಳು ತಮ್ಮ ಸ್ವಾರ್ಥಕ್ಕಾಗಿ ವಿಚಿತ್ರ ಹೊಂದಾಣಿಕೆಗಳನ್ನು ಒಪ್ಪಿಕೊಳ್ಳುವ ಕ್ರಿಯೆಯನ್ನು ಗಮನಿಸಿದಾಗ ಮಾನವೀಯ ಅವಸ್ಥೆಯ ಯಥಾರ್ಥವಾದ ಚಿತ್ರವೇ ನಮ್ಮೆದುರು ತೆರೆದುಕೊಳ್ಳುತ್ತದೆ.

'ದಾಹ' ಕಥೆಯ ನಿವೇದಕ-ಪದ್ಮ ಆಧುನಿಕ ಸಮಾಜದ ಕನಸುಗಳನ್ನು ಸಾಕಾರಗೊಳಿಸಲು ಸಿದ್ಧವಾಗಿರುವಂತೆ ಕಾಣಿಸುತ್ತಾರೆ. ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಡಿಯಲ್ಲಿ ಸಮಾಜದ ಸ್ಥಿತಿಗತಿಗಳು ಹೇಗಿರುತ್ತವೆ ಎಂಬುದರ ಶೋಧ ಇಲ್ಲಿದೆ. ಹೆಣ್ಣನ್ನು ಭೋಗದ ಸಂಕೇತವಾಗಿ ಬಳಸಿಕೊಳ್ಳುವ ಪುರುಷ ಪ್ರಧಾನ ಸಮಾಜವನ್ನು ಪ್ರತಿನಿಧಿಸುವ ಪ್ರಾತಿನಿಧಿಕ ವಸ್ತು ದಾಹ ಕಥೆಯ ವಸ್ತುವಾಗಿದೆ.

ಕಾಮದ ದಾಹ ಮನುಷ್ಯನನ್ನು ಎಂತಹ ಅಮಾನವೀಯ ಸ್ಥಿತಿಗೆ ದೂಡುತ್ತದೆ ಎಂಬುದಕ್ಕೆ ನಿವೇದಕ ಸ್ಪಷ್ಟ ಉದಾಹರಣೆಯಾಗುತ್ತದೆ. ಮಾನವನು ನೈತಿಕತೆಯ ಹಾಗೂ ಸ್ವಾಭಿಮಾನದ ಪ್ರಶ್ನೆಗಳನ್ನೇ ಬದಿಗೊತ್ತಿ ಕಾಮ ಪ್ರವೃತ್ತಿಯ ಮೇಲೆ ಗೆಲುವು ಸಾಧಿಸಲು ಹೊರಟ ಪ್ರಸಂಗ ಈ ಕಥೆಯಲ್ಲಿ ವ್ಯಕ್ತವಾಗಿದೆ. ಹೆಣ್ಣಿನ ಮೇಲಿನ ಶೋಷಣೆಗಳು ಹಿಂದಿನಿಂದಲೂ ಸಹಜವಾದ ನಡವಳಿಕೆಗಳೇ ಆಗಿವೆ. ಆದರೆ ಬಹಳ ನಿಶ್ಯಬ್ಧವಾಗಿ ಸಮಾಜದ ಕೇಳಿಸದಂತೆ ಹೆಣ್ಣಿನ ದೌರ್ಜನ್ಯಗಳು ಈ ಕಥೆಯಲ್ಲಿ ನಡೆಯುತ್ತವೆ. ಸರೋಜ, ಸಿಲ್ವಿಯಾ ಎಂಬ ಹೆಣ್ಣುಗಳು ಈಗಾಗಲೇ ಕಾಮದ ದಾಹಕ್ಕೆ ನಿವೇದಕನಿಗೆ ಬಲಿಯಾಗಿದ್ದಾರೆ. ಪದ್ಮ ಬುದ್ಧಿವಂತ, ಅನುಕಂಪ ಹೊಂದಿರುವ ಹೆಣ್ಣು ಇಂತಹವಳು ನಿವೇದಕನನ್ನು ಸಂತೈಸಲು ಬಂದಾಗ ಅವಳನ್ನೇ ಕಾಮದ ಕಣ್ಣುಗಳಿಂದ ನೋಡುವ ನಿವೇದಕನು ಪಾಪಪ್ರಜ್ಞೆಯಲ್ಲಿ ಸಿಲುಕುವುದು ಕಥೆಯ ದಿಕ್ಕನ್ನು ಬದಲಿಸಿದೆ.

ಒಟ್ಟಾರೆ ನೈತಿಕ ಮತ್ತು ಮಾನವೀಯ ಮೌಲ್ಯಗಳಡಿಯಲ್ಲಿ ಪಾಪಪ್ರಜ್ಞೆ ಜಾಗೃತವಾಗಿ ಆಗುವ ಶೋಷಣೆಯನ್ನು ತಪ್ಪಿಸುತ್ತದೆ. ಹೊಸ ಬದುಕನ್ನು ನಿರ್ಮಿಸಿಕೊಳ್ಳಲು ವೇದಿಕೆಯನ್ನು ಹಾಕಿಕೊಡುತ್ತದೆ. ಇದರ ಮೂಲಕ ಲಿಂಗ ತಾರತಮ್ಯ ಸಲ್ಲದು ಎಂಬ ವಿಚಾರವನ್ನು ಯಾವುದೇ ಘರ್ಷಣೆಗಳಿಲ್ಲದೇ ಸಾಧಿಸಿರುವ ನೆಲೆಯಲ್ಲಿ ಕಥೆಗೆ ಹೊಸತನವಿದೆ. ನವ್ಯಸಾಹಿತ್ಯದ ಸಮಾಜ ಕಟ್ಟುವ ಕ್ರಮಗಳ ಬಳಕೆಯಿದೆ ಎನ್ನಬಹುದು.

## ೪.೪. ನಗರ ಮತ್ತು ಗ್ರಾಮದ ನಡುವಿನ ಸಮತೋಲನವನ್ನು ಪ್ರತಿಬಿಂಬಿಸುವ ಸಮಾಜ :

ಗ್ರಾಮೀಣ ಹಿನ್ನೆಲೆಯಲ್ಲಿ ಲಂಕೇಶರ ಬಹುತೇಕ ಕಥೆಗಳು ರೂಪುಗೊಂಡಿವೆ. ನವ್ಯ ಸಾಹಿತ್ಯದಲ್ಲಿ ಸಾಂಪ್ರದಾಯಿಕ ಮೌಲ್ಯಗಳಿಂದ ಮುಕ್ತವಾಗಲು ಯತ್ನಿಸುವ ಹಳ್ಳಿಯನ್ನು ನೋಡುತ್ತೇವೆ. ಆದರೂ ಗ್ರಾಮೀಣ ಮೌಲ್ಯಗಳ ವಿರುದ್ಧದ ಮನಃಸ್ಥಿತಿ ಇರುವ ನಾಯಕರು ಇಲ್ಲಿ ಬರುತ್ತಾರೆ. ಇವರು ನಗರಪ್ರಜ್ಞೆಗೆ ಆಕರ್ಷಿತರಾದ ನಾಯಕರು. ಹೊಸ ಮೌಲ್ಯಗಳ ಪ್ರಭಾವಕ್ಕೆ ಸಿಲುಕಿರುವ ವ್ಯಕ್ತಿಗಳು ನಗರದಿಂದ ಗ್ರಾಮಕ್ಕೆ ಹೋಗಿ ಗ್ರಾಮ ಮತ್ತು ನಗರದ ನಡುವೆ ಸಮತೋಲನವನ್ನು ಬಿಂಬಿಸುವ ಸಮಾಜವನ್ನು ನಿರ್ಮಿಸಲು ಮುಂದಾಗುತ್ತಾರೆ. ನಗರದಲ್ಲಿರುವ ಮೌಲ್ಯಗಳ ಪ್ರತಿಬಿಂಬ ಗ್ರಾಮದ ಮೇಲೆ ಪ್ರತಿಬಿಂಬಿಸುವಂತೆ ಮೂಡುತ್ತಾರೆ. ಇದಕ್ಕೆ 'ರೊಟ್ಟಿ', 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಗಳನ್ನು ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಗ್ರಾಮ ಮತ್ತು ನಗರದ ಚಹರೆಗಳು 'ಕೆರೆಯ ನೀರನು ಕೆರೆಗೆ ಚೆಲ್ಲಿ' ಕಥೆಯಲ್ಲಿ ವಿಜೃಂಭಣೆಯ ನೆಲೆಯಲ್ಲಿ ಕಾಣಿಸಿಕೊಳ್ಳುತ್ತವೆ. ಶಾಂತಿನಾಥ ದೇಸಾಯಿಯವರು ಕಥೆಯನ್ನು ಕುರಿತು "ಪಟ್ಟಣದ ಮೌಲ್ಯಗಳ ಬಗ್ಗೆ ಒಂದು ರೀತಿಯ ಸೆಂಟಿಮೆಂಟಲ್ ಮನೋವೃತ್ತಿ ಎದ್ದು ತೋರುತ್ತದೆ" ಎಂದು ಅಭಿಪಾಯ ಪಟ್ಟಿದ್ದಾರೆ. ಈ ಮಾತಿನಂತೆ ಕತೆಯಲ್ಲಿ ಬರುವ ಗೌರಿ ಮತ್ತು ಶಿವರುದ್ರ ಪಟ್ಟಣದ ಮೌಲ್ಯಗಳ ಬಗ್ಗೆ ಸೆಂಟಿಮೆಂಟಲ್ ಮನೋಧೋರಣೆ ತಾಳುತ್ತಾರೆ. ಪರಮೇಶ ವಿದ್ಯಾಭ್ಯಾಸ ಮುಗಿಸಿ ಪಟ್ಟಣದಿಂದ ಬಂದಾಗ ಅವನನ್ನು ಅನುಕರಣೆ ಮಾಡುವ ಔದಾರ್ಯ ತೋರುತ್ತಾರೆ. ಅವನ ಇಂಗ್ಲಿಷ್ ಮಾತುಗಳು, ಗೌರಿ ಶಿವರುದ್ರ ಇವರಿಬ್ಬರಲ್ಲಿ ಕೀಳರಿಮೆಯನ್ನು ಹುಟ್ಟು ಹಾಕುತ್ತವೆ. ನಗರ ಜೀವನದ ಬಗ್ಗೆ ಪ್ರೀತಿ ಮೂಡಿ ಹಳ್ಳಿಯ ಜೀವನವನ್ನು ತಿರಸ್ಕರಿಸುತ್ತಾರೆ. ತನ್ನ ದಡ್ಡತನವನ್ನು ಅಲ್ಲಗೆಳೆಯುವ ಪ್ರಯತ್ನಕ್ಕೆ ಮುಂದಾಗುತ್ತಾರೆ. ಗೌರಿ ತನ್ನನ್ನು ಅಜ್ಜಿ ಶಾಲೆಗೆ ಕಳುಹಿಸಿದಾಗ ಶಿವರುದ್ರನ ಹಿಂದೆ ಗದ್ದೆಯಲ್ಲಿ ಶುಂಠಿ ನೆಡುತ್ತಿದ್ದು ಸನ್ನಿವೇಶವನ್ನು ನೆನೆಸಿಕೊಂಡು ಮರಗುತ್ತಾಳೆ.

ಪರಮೇಶ ಬೆಂಗಳೂರಿನಂಥ ನಗರದಲ್ಲಿ ವಿದ್ಯೆ ಕಲಿತು ಡರ್ಟಿಟ್ರೈನ್ಸ್, ರಫ್, ಸೆಕೆಂಡ್‌ಕ್ಲಾಸ್, ಫ್ರೀ, ವ್ಯಾನಿಟಿ ಬ್ಯಾಗ್ ಮುಂತಾದ ಇಂಗ್ಲಿಷ್ ಪದಗಳನ್ನು ಸೇರಿಸಿ ಮಾತನಾಡಿದಾಗ ಗೌರಿ ನನ್ನ ಮಾವ ಸಾಹೇಬನಾಗಿದ್ದಾನೆ. ನಾನು ಓದಿದ್ದರೆ ಚೆನ್ನಿತು ಎಂದು

ಹಲುಬುತ್ತಾಳೆ. ಹೀಗೆ ನಗರಪ್ರಜ್ಞೆಗೆ ಸೋತ ಗೌರಿಗೆ ಬೀಳುವ ಕನಸು ಅವಳನ್ನು ಮತ್ತೆ ಹಳ್ಳಿಗೆ ಕರೆದೊಯ್ಯುತ್ತದೆ.

ಗೌರಿ ಕನಸಿನಲ್ಲಿ "ನಾಗಲೋಟದಲ್ಲಿ ಓಡುತ್ತ ತಾನೆಂದೂ ನೋಡದ ಗುಡ್ಡ ಬೆಟ್ಟ, ಮರಗಳ ಹಿಂದೆ ಬಿಡುತ್ತಿದ್ದ ಕುದುರೆ ಬೆವತು ನೊರೆಗರೆವುದನ್ನು ಕಂಡು "ಅಜ್ಜ ಅಜ್ಜಿ ನನ್ನೂರು!" ಎಂದು ಅಳತೊಡಗಿದಳು. ಮನುಷ್ಯರ ಸುಳಿವಿಲ್ಲ. ಓಟ ಹೆಚ್ಚಾದ ಹಾಗೆ ಪುಕ್ಕಲು ವಿಪರೀತವಾಗಿ ಇನ್ನೇನು ಕುದುರೆಯಿಂದ ಹಾರಿಬಿಡೋಣ ದೇವರಿಟ್ಟಿದ್ದಾಗಲಿ ಎಂದು ನಿರ್ಧಾರಕ್ಕೆ ಬರುತ್ತಿದ್ದಾಗ ಸದ್ಯ ಕುದುರೆ ನೆಲಕ್ಕೆ ಬಿತ್ತು. ಸುತ್ತ ನೋಡಿದರೆ ದಟ್ಟವಾದ ಕಾಡಿನಲ್ಲಿ ಮಟ ಮಟ ಮಧ್ಯಾಹ್ನದಲ್ಲಿ ಸಣ್ಣ ಮಗುವೊಂದು ಕಿಲಕಿಲನೆ ನಕ್ಕ ಹಾಗಾಗಿ ಗೌರಿ, ಕೊನೆಯ ಪ್ರಯತ್ನವೆಂದು ಕಿಟಾರನೆ ಕಿರುಚಿಕೊಂಡಳು."[೪೫]

ಇಂತಹ ಭೀಕರ ಕನಸನ್ನು ಕಂಡ ಗೌರಿಗೆ ತನ್ನ ಸುಪ್ತಪ್ರಜ್ಞೆ ಜಾಗೃತಗೊಳ್ಳುತ್ತದೆ. ಪಟ್ಟಣದ ಬದುಕು ಅಷ್ಟೇನು ಆಕರ್ಷಣೀಯ ಅಲ್ಲ ಎಂಬುದು ಗೋಚರಿಸುತ್ತದೆ. ಅನಂತರ ತನ್ನ ಮಾವನಾದ ಪರಮೇಶನನ್ನು ಭೇಡಿಸಲು ಪ್ರಾರಂಭಿಸುತ್ತಾಳೆ. ಇಲ್ಲಿ ಗೌರಿಗೆ ನಗರಪ್ರಜ್ಞೆಯ ಬಗ್ಗೆ ವಿಶ್ವಾಸಗಳಿಲ್ಲ, ಕಾಳಜಿಯಿಲ್ಲ ಮತ್ತು ಗ್ರಾಮಜೀವನದ ಬಗ್ಗೆ ತಿರಸ್ಕಾರವಿಲ್ಲ. ತನಗೆ ತನ್ನ ಊರು ಎಂದರೆ ಪಂಚಪ್ರಾಣ. ಇಲ್ಲಿಯ ಹೊಲ, ಗದ್ದೆ, ಅಜ್ಜಿಯ ಪ್ರೀತಿ ನಗರ ಜೀವನವನ್ನು ಮರೆಯುವಂತೆ ಮಾಡುತ್ತವೆ. ಗ್ರಾಮ ಮತ್ತು ನಗರ ಎರಡು ಜೀವನಗಳನ್ನು ಸಮತೋಲನದಲ್ಲಿರಿಸಿ ನೋಡುವ ಹೊಸದೃಷ್ಟಿಗೆ ಗೌರಿ ಸಾಕ್ಷಿಯಾಗುತ್ತಾಳೆ.

ಇಂತಹ ನಗರ ಹಾಗೂ ಗ್ರಾಮದ ಜೀವನವನ್ನು ಸಮತೋಲನಕ್ಕೆ ತರುವ ಪ್ರಯತ್ನದಿಂದ ರಚನೆಯಾದ ಸಾಮಾಜಿಕ ಕಳಕಳಿ ವ್ಯಕ್ತಪಡಿಸುವ ಮತ್ತೊಂದು ಕಥೆ 'ರೊಟ್ಟಿ'.

'ರೊಟ್ಟಿ' ಕಥೆಯನ್ನು ಕುರಿತು ಗೋಪಾಲಕೃಷ್ಣ ಅಡಿಗರು "ಕನ್ನಡ ಸಾಹಿತ್ಯದಲ್ಲಿಯೇ ಒಂದು ಅತ್ಯುತ್ತಮ ಕಥೆ" ಎಂದಿದ್ದಾರೆ. ಈ ಕಥೆಯಲ್ಲಿ ಕಂಡುಬರುವ ಸಮಾಜ ಪಟ್ಟಣ ಸಮಾಜ. ಗ್ರಾಮ ಸಮಾಜದ ಹೆಣ್ಣೊಬ್ಬಳು ಪಟ್ಟಣ ಸಮಾಜದಲ್ಲಿ ತೊಳಲಾಟ, ಗೊಂದಲಗಳಿಗೆ ಒಳಗಾಗುವ ಸ್ಥಿತಿಯನ್ನು ಕಥೆ ಪ್ರತಿನಿಧಿಸುತ್ತದೆ. ಹಸಿವು, ಬಡತನ,

---

[೪೫] "ಕೆರೆಯ ನೀರನು ಕೆರೆಗೆ ಚೆಲ್ಲಿ ಮತ್ತು ಇತರ ಕಥೆಗಳು", ಲಂಕೇಶ್, ಪಿ., ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೭, ಪು.೬೫–೭೨.

ಶ್ರೀಮಂತಿಕೆ, ಕೊಳಕುತನ– ಮುಂತಾದ ಎಲ್ಲಾ ಅಂಶಗಳು ಪಟ್ಟದ ವಾತಾವರಣದಲ್ಲಿ ಸಾಮಾನ್ಯವಾಗಿರುತ್ತದೆ. ಮಾನವೀಯ ಮೌಲ್ಯಗಳು ನಗರ ಸಂಸ್ಕೃತಿಯಲ್ಲಿ ಸಾಕಾರಗೊಳ್ಳುವುದಿಲ್ಲ. ನಿಷ್ಟುರತೆ, ಭಾವನಾರಹಿತ ವಾಸ್ತವತೆ ನಗರ ಪ್ರಜ್ಞೆಯುಳ್ಳ ಜನರಲ್ಲಿ ಕಾಣಬಹುದು.

ಕಥೆಯು ಸಿಂಗಾರಪೇಟೆಯ ಸ್ಟೇಷನ್ನಿನ ದೃಶ್ಯದ ವರ್ಣನೆಯಿಂದ ಪ್ರಾರಂಭವಾಗುತ್ತದೆ. ಕಥೆಯಲ್ಲಿ ಬರುವ ಕೆಲವೇ ಸಾಲುಗಳಲ್ಲಿ ನಗರದ ಜೀವನಕ್ರಮವನ್ನು ಹಿಡಿದಿಟ್ಟಿರುವುದನ್ನು ಕಾಣಬಹುದು.

"ಅತ್ತಿಂದಿತ್ತ ಓಡಾಡುವ ಕೂಲಿಗಳು, ಹರಿದ ಬಟ್ಟೆ, ಕೊಳಕು ಮೈ, ಕಂಕುಳಲ್ಲಿ ಮಕ್ಕಳು. . . ಗೋಡೆಗಳ ಮೇಲೆಲ್ಲ ತನಗೆ ಅರ್ಥವಾಗದ ಬಣ್ಣದ ಚೀಟಿಗಳು, ಬೈದಾಟಗಳು, ಸ್ಟೇಷನ್ನಿನ ಹಿಂಭಾಗಕ್ಕೆ ಒತ್ತಟ್ಟಿನಿಂದ, ನೆಲದಿಂದ ಆಕಾಶದ ತನಕ, ಹೊಗೆ; ಊರೊಳಗೆ ಹೋದರೆ ಹತ್ತಾರು ಮೆರವಣಿಗೆ"[೪೬]

ಈ ಸಾಲುಗಳು ನಗರದ ಜೀವನಕ್ರಮವನ್ನು ಸ್ಪಷ್ಟಪಡಿಸುತ್ತವೆ. ನಗರದಲ್ಲಿ ಕೂಲಿಕಾರ್ಮಿಕರಿರುತ್ತಾರೆ, ಚಿಂದಿ ಹಾಯುವವರು ಇರುತ್ತಾರೆ. ಇವರ ನಡುವೆ ಬಾರಿ ಬಂಗಲೆಯಲ್ಲಿ ವಾಸ ಮಾಡುವ ಶ್ರೀಮಂತರು ಇರುತ್ತಾರೆ. ಇಲ್ಲಿ ಯಾರು ತನ್ನವರಲ್ಲ ಎಂಬ ಅನಾಥಪ್ರಜ್ಞೆ, ಆಕೆಯಲ್ಲಿ ಕಾಣುತ್ತದೆ. ಸಾವಿರಾರು ಜನರು ಸ್ಟೇಷನ್ನಿನಲ್ಲಿದ್ದರೂ ಸಹ ಒಬ್ಬರಿಗೊಬ್ಬರು ಪರಿಚಯವಿಲ್ಲ. ಅವರವರ ಜೀವನ ಅವರದು. ಜೊತೆಗೆ ಗೋಡೆಗಳ ಮೇಲೆ ಬಣ್ಣದ ಚೀಟಿಗಳು. ಇವುಗಳೆಲ್ಲಾ ಪಟ್ಟಣದ ಪ್ರವೇಶದಲ್ಲಿ ಕಾಣಸಿಗುವ ದೃಶ್ಯಾವಳಿಗಳು. ಜನಸಂದಣಿ ದಟ್ಟವಾಗಿರುವುದು ಪಟ್ಟಣದಲ್ಲಿ ಎಂಬುದು ಈ ದೃಶ್ಯದಿಂದ ತಿಳಿಯುತ್ತದೆ. ಪಟ್ಟಣದ ಸಂಸ್ಕೃತಿಯ, ಆಧುನಿಕತೆಯ ಅರಿವೆ ಇಲ್ಲದೇ ಪಟ್ಟಣ ಪ್ರವೇಶ ಮಾಡುವ ವ್ಯಕ್ತಿಯಲ್ಲಿ, ಮೂಡುವ ಅನಾಥಪ್ರಜ್ಞೆ, ನಿಷ್ಟುರತೆ, ಕುತೂಹಲಗಳು ಆಕೆಯ ಪಾತ್ರದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ. ಅಪರಿಚಿತರ ಮಧ್ಯ ಅಸಾಹಯಕಳಾಗಿ ಆಕೆ ಅನುಭವಿಸಿದ ಹಿಂಸೆ, ಮಾನಸಿಕ ತಳಮಳ ಅಷ್ಟಿಷ್ಟಲ್ಲ. ಇವೆಲ್ಲವನ್ನು ತಾಳ್ಮೆಯಿಂದ ಸಹಿಸಿದ್ದು ಬದುಕುವುದಕ್ಕಾಗಿ, ತನ್ನ ಕುಟುಂಬವನ್ನು ಮತ್ತೆ ನೋಡುವುದಕ್ಕಾಗಿ ಎಂಬುದು ಸ್ಪಷ್ಟವಾದ ಸಂಗತಿ.

---

[೪೬] "ಪಿ. ಲಂಕೇಶ್ ಅವರ ಆಯ್ದ ಕಥೆಗಳು", ಲಂಕೇಶ್, ಪಿ., ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ), ಕರ್ನಾಟಕ, ೨೦೦೬ ಪು.೨೬–೩೧.

ಪೊಲೀಸು, ಲಾಠಿಏಟು, ರಕ್ಷಣೆ, ವ್ಯಾನ್, ಸ್ಟೇಷನ್ನು ಮುಂತಾದ ಪದ ಪ್ರಯೋಗಗಳು ಆಧುನಿಕತೆಯ ದುರಂತವನ್ನು ಪ್ರತಿಬಿಂಬಿಸುತ್ತವೆ. ಇವುಗಳೆಲ್ಲ ಮುಗ್ಧ ಹೆಣ್ಣಾದ ಆಕೆಗೆ ಶಾಪವಾಗಿ ಪರಿಣಮಿಸಿದ್ದು ವಿಪರ್ಯಾಸ. ಪೊಲೀಸರು ರಕ್ಷಣೆ ಕೊಡುವ ನೆಪದಲ್ಲಿ ವ್ಯಾನ್‌ನಲ್ಲಿ ಕೂರಿಸಿಕೊಂಡು ಸ್ಟೇಷನ್ನಿಗೆ ಕರೆದುಕೊಂಡು ಹೋಗುವಾಗ ಆಕೆಯಲ್ಲಿ ಭಯ ಆವರಿಸುತ್ತದೆ. ನಗರ ಸಂಸ್ಕೃತಿಯ ವಾತಾವರಣದ ಬಗ್ಗೆ ಜಿಗುಪ್ಸೆ ಮೂಡುತ್ತದೆ.

'ರೊಟ್ಟಿ' ಇದು ಹಸಿವು, ಅಸಾಹಯಕತೆ, ಗ್ರಾಮ ಸಮಾಜದ ಅಹಾರ ಪದ್ಧತಿ– ಈ ಎಲ್ಲಾ ಅಂಶಗಳಿಗೂ ಸಮನಾಂತರವಾಗಿ ಪ್ರತಿಬಿಂಬಿತವಾಗಿದೆ. ರೊಟ್ಟಿಯ ಕಾರಣದಿಂದಾಗಿ ನಗರ ಸಮಾಜದಲ್ಲಾದ ವ್ಯಾಜ್ಯಗಳು, ಅದರಿಂದಾದ ಅಂತ್ಯ ಬದಲಾದ ವ್ಯಕ್ತಿ ಸಮಾಜಗಳಿಗೆ ಪ್ರತಿಮೆಯಂತಿದೆ.

ಸಮಾಜದಲ್ಲಿ ಉಂಟಾಗುವ ಸಾಮಾಜಿಕ ಬದಲಾವಣೆಯ ಪ್ರಕ್ರಿಯೆಗಳು ಹೊಸ ವ್ಯಕ್ತಿಗಳ ಸೃಷ್ಟಿಯಿಂದಾದದ್ದು ಎಂಬುದು ಕಥೆಗಳ ಮೂಲಕ ತಿಳಿಯುತ್ತದೆ. ಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಸಂಗತಿಯೆಂದರೆ ಗ್ರಾಮಸಮಾಜ ಮತ್ತು ನಗರ ಸಮಾಜಗಳ ಮುಖಾಮುಖಿ. ಈ ಮುಖಾಮುಖಿಯ ಲಾಭ ಪಡೆಯುವವರೆಂದರೆ ವಿದ್ಯಾವಂತರಾದ ತರುಣ ವ್ಯಕ್ತಿಗಳು. ವಿದ್ಯಾಭ್ಯಾಸ ಇವರನ್ನು ಪಟ್ಟಣ ಸಂಪರ್ಕಕ್ಕೆ ತರುತ್ತದೆ. ಹೊಸ ಅನಿಸಿಕೆ, ಹೊಸ ಪ್ರಜ್ಞೆಯನ್ನು ವಿಶೇಷವಾಗಿ ಬೆಳೆಸಿಕೊಳ್ಳುವ ಅನುವು ಮಾಡಿಕೊಡುತ್ತದೆ. ಕ್ರಮೇಣ ಅವರಲ್ಲಿರುವ ಹಳ್ಳಿಯ ಮುಗ್ಧತೆಯನ್ನು ದೂರ ಮಾಡುವ ಪ್ರಯತ್ನಗಳನ್ನು ವಿದ್ಯಾಭ್ಯಾಸ ಮಾಡುತ್ತದೆ. ಆದರೆ ಅವಿದ್ಯಾವಂತ ವ್ಯಕ್ತಿಗಳಿಗೆ ನಗರ ಸಮಾಜ ಜೈಲಿನ ಹಾಗೆ ಕಂಗೊಳಿಸುತ್ತದೆ. ನಗರದಲ್ಲಿ ನೋಡುವ ಘಟನೆಗಳು, ಸೂಕ್ಷ್ಮಮನಸ್ಥಿತಿಯವರಾದ ಹಳ್ಳಿಗರನ್ನು ಉಸಿರುಕಟ್ಟಿಸುತ್ತವೆ. ನಗರದ ಮನುಷ್ಯನಲ್ಲಿರುವ ಉದಾತ್ತತೆ, ದೊಡ್ಡಸ್ತಿಕೆಗಳು ತೀರಾ ಅಸಹಜವಾಗಿ ಅವಿದ್ಯಾವಂತ ವ್ಯಕ್ತಿಗಳಿಗೆ ಗೋಚರಿಸುತ್ತವೆ. ಹೀಗೆ ನಗರದ ಸಂಕೀರ್ಣ ಅನುಭವಗಳು ಅವಿದ್ಯಾವಂತ ಮತ್ತು ವಿದ್ಯಾವಂತ ಹಳ್ಳಿಗರನ್ನು ಮಂತ್ರಮುಗ್ಧಗೊಳಿಸುವುದನ್ನು ಕಥೆಗಳಲ್ಲಿ ಕಾಣಬಹುದು.

'ಸ್ಟೆಲ್ಲಾ ಎಂಬ ಹುಡುಗಿ' ಕಥೆಯಲ್ಲಿ ಬರುವ ಸಾವಿತ್ರಿ ಮತ್ತು ಸುರೇಶ ವಿದ್ಯಾವಂತರು ಗ್ರಾಮ ಸಮಾಜದಲ್ಲಿ ವಾಸವಾಗಿರುವವರು. ನಗರದ ಜೊತೆಗೆ ಒಡನಾಟ ಇಟ್ಟುಕೊಂಡಿರುವವರು. ಸುರೇಶನು ತನ್ನ ತಂದೆಯಾದ ಸುಬ್ಬಣ್ಣನ ಖಾಯಿಲೆ ಗುಣಪಡಿಸುವುದಕ್ಕಾಗಿ ತಮ್ಮ ಜಮೀನು, ಕೂಡಿಟ್ಟಿದ್ದ ಹಣ ಎಲ್ಲವನ್ನು ಕಳೆದುಕೊಳ್ಳುತ್ತಾರೆ.

ಇಲ್ಲಿ ನಮಗೆ ಗೋಚರಿಸುವ ಮುಖ್ಯ ಅಂಶವೆಂದರೆ ವಾಸ್ತವದ ನೆಲೆಯಲ್ಲಿಯೇ ಬದುಕಿನ ನಿಗೂಢತೆಯನ್ನು ಶೋಧಿಸುತ್ತಾ ಅದರಲ್ಲಿ ಅಡಗಿರುವ ಜೀವನಿಷ್ಟ ಮೌಲ್ಯಗಳಲ್ಲಿ ಈ ಪಾತ್ರಗಳ ಮೂಲಕ ಅರ್ಥಮಾಡಿಕೊಳ್ಳಬಹುದು. ಈ ನಿಟ್ಟಿನಲ್ಲಿ ಸುರೇಶ ಮತ್ತು ಸಾವಿತ್ರಿ ಗ್ರಾಮ ಮತ್ತು ನಗರ ಸಮಾಜವನ್ನು ಸಮತೋಲನದಲ್ಲಿಟ್ಟು ನೋಡುತ್ತಾರೆ.

ಲಂಕೇಶರ ಕಥೆಗಳು ಕಟ್ಟುವ ಸಮಾಜ ಆದರ್ಶತನದಿಂದ ಕೂಡಿದೆ. ಇಲ್ಲಿ ವ್ಯಕ್ತಿಗಳ ಬದಲಾವಣೆಗಳಿವೆ, ಬದಲಾದ ಸಂದರ್ಭಗಳಿವೆ, ಹೊಸತನದ ಮೌಲ್ಯಗಳಿವೆ, ಹೊಸಪ್ರಜ್ಞೆ ಮೂಡಿಸಿಕೊಳ್ಳುವ ಹಂಬಲವಿದೆ. ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ ವಿಶಿಷ್ಟವಾಗಿ ಮೂಡಿ ಬಂದಿದೆ. ಗ್ರಾಮೀಣ ಸಮಾಜದಲ್ಲಿ ಉಂಟಾಗುತ್ತಿರುವ ಪಲ್ಲಟಗಳು ಬದಲಾವಣೆಯನ್ನು ತರುವ ಹೊಸ ವ್ಯಕ್ತಿಗಳ ಮೂಲಕ ಸಾಕಾರಗೊಂಡಿದೆ. ಹೊಸ ಅನಿಸಿಕೆ, ಐಡಿಯಾ, ನಂಬಿಕೆಗಳಿಗೆ ಕೈಚಾಚುತ್ತಿರುವ ಹಳ್ಳಿಗರನ್ನು ನಾವಿಲ್ಲಿ ಕಾಣುತ್ತೇವೆ. ಹಳ್ಳಿಗಳಲ್ಲಿ ಆಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಅವುಗಳ ಗುಣದೋಷಗಳೊಂದಿಗೆ ಲಂಕೇಶರ ಕಥೆಗಳು ಕಟ್ಟಿಕೊಟ್ಟಿವೆ.

ಒಟ್ಟಾರೆ ಹೊಸ ಸಮಾಜದ ಕಲ್ಪನೆ ಬದಲಾದ ವ್ಯಕ್ತಿಗಳಿಂದ ಹೇಗೆ ಸಾಕಾರಗೊಳ್ಳುತ್ತದೆ. ಅವರು ಕಟ್ಟಬಯಸುವ ಸಮಾಜ ಯಾವ ಮಾದರಿಯದ್ದಾಗಿರುತ್ತದೆ ಎಂಬುದು ಹಲವು ಬಗೆಯ ವ್ಯಕ್ತಿಗಳಿಂದ ಸಾಬೀತುಪಟ್ಟಿದೆ. ವ್ಯಕ್ತಿಗಳಲ್ಲಿ ಮೂಡಿದ ಹೊಸ ಆಸೆ–ಆಕಾಂಕ್ಷೆಗಳು ಹೊಸ ಸಮಾಜದ ನಿರ್ಮಾಣಕ್ಕೆ ನಾಂದಿ ಹಾಡುತ್ತವೆ ಎಂಬುದು ಕಥೆಗಳ ಮೂಲಕ ತಿಳಿಯಬಹುದು.

ಸಮಕಾಲೀನ ಸಮಾಜವನ್ನು ಅರ್ಥಮಾಡಿಕೊಳ್ಳಬಹುದಾದ ಹಿನ್ನೆಲೆಯಿಂದಲೇ ಲಂಕೇಶರ ಕಥೆಗಳಲ್ಲಿ ಬರುವ ಸಮಾಜವನ್ನು ಈ ಅಧ್ಯಾಯದಲ್ಲಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಸಮಾಜದಲ್ಲಿ ಜಮೀನ್ದಾರಿ ಪದ್ಧತಿಯನ್ನು ಮೀರುವ ಜಾತಿಪದ್ಧತಿಯನ್ನು ಧಿಕ್ಕರಿಸುವ, ಮಹಿಳೆಯರಿಗೆ ಪ್ರಾಮುಖ್ಯತೆ ನೀಡುವ, ನಗರ ಮತ್ತು ಗ್ರಾಮದ ನಡುವೆ ಸಮತೋಲನವನ್ನು ಬಿಂಬಿಸುವ ಅಂಶಗಳು ಹಾಸುಹೊಕ್ಕಾಗಿವೆ. ಈ ಎಲ್ಲಾ ಅಂಶಗಳಿಗೆ ಸಂಬಂಧಪಟ್ಟ ಹಾಗೆ ಸಮಾಜದಲ್ಲಿ ದಬ್ಬಾಳಿಕೆಗಳು ಮತ್ತು ಆ ದಬ್ಬಾಳಿಕೆಗಳ ವಿರುದ್ಧ ಧ್ವನಿಯೆತ್ತುವುದು ಸಾಮಾನ್ಯವಾಗಿ ಕಂಡುಬರುತ್ತದೆ. ದಬ್ಬಾಳಿಕೆ ಮತ್ತು ಇದರ

ವಿರೋಧಿ ಧ್ವನಿಗಳು ಕಾಲಕಾಲಕ್ಕೆ ಬದಲಾದರೂ ಸಹ ಮೂಲತಃ ಅದಕ್ಕಂಟಿಕೊಂಡ ಹಾಗೆ ಇರುವ ಹಿಂಸೆ ಮತ್ತು ಸಂಕಟ ಹೆಚ್ಚೇನು ಬದಲಾಗಿಲ್ಲ. ಈ ಹಿಂಸೆ ಮತ್ತು ಸಂಕಟಗಳ ಮಿಶ್ರಣ ಒಂದು ರೀತಿಯಲ್ಲಿ ಲಂಕೇಶರ ಕಥೆಗಳು ಕಟ್ಟುವ ಸಮಾಜದಲ್ಲಿ ಚಿತ್ರಿತವಾಗಿರುವುದನ್ನು ಕಾಣಬಹುದು.

ಅಧ್ಯಾಯ–೫

# ಸಮಾರೋಪ

ಆಧುನಿಕ ಕನ್ನಡ ಸಣ್ಣಕಥೆಯ ಚರಿತ್ರೆಯು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಮೂಡಿಬಂದಿತು. ಲಂಕೇಶರು ಹಲವು ಸಾಹಿತ್ಯ ಪ್ರಕಾರಗಳನ್ನು ಬಳಸಿದ್ದರೂ ಸಣ್ಣಕಥೆಯ ಮಾಧ್ಯಮದಲ್ಲಿ ಅವರದ್ದು ದೊಡ್ಡ ಹೆಸರು. ಲಂಕೇಶರ ಕಥನ ಸಾಹಿತ್ಯದಲ್ಲಿ ಕಂಡುಬರುವ ವ್ಯಕ್ತಿಗಳು ಮತ್ತು ಅವರು ಕಟ್ಟುವ ಸಮಾಜವನ್ನು ತಿಳಿಯುವ ಪ್ರಯತ್ನವನ್ನು ಈ ಸಂಪ್ರಬಂಧದಲ್ಲಿ ಮಾಡಲಾಗಿದೆ.

ಲಂಕೇಶರ ಕಥನ ಸಾಹಿತ್ಯದಲ್ಲಿ ವ್ಯಕ್ತಿ ಮತ್ತು ಸಮಾಜ ಮೂಡಿಬಂದಿರುವ ರೀತಿಯನ್ನು ವಿಶ್ಲೇಷಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಈ ಪ್ರಕ್ರಿಯೆಯಲ್ಲಿ ತಿಳಿಯುವುದೆಂದರೆ ಲಂಕೇಶರ ಕಥೆಗಳಲ್ಲಿ ಕಂಡುಬರುವ ವ್ಯಕ್ತಿಗಳು ಸಾಮಾನ್ಯವಾಗಿ ಅಸ್ತಿತ್ವವಾದದ ಹಿನ್ನೆಲೆಯಿಂದ ಮೂಡಿ ಬಂದಂತಹ ವ್ಯಕ್ತಿಗಳು ಎನ್ನುವುದು ಸ್ಪಷ್ಟವಾಗುತ್ತದೆ. ಇಂತಹ multi dimentional ಆದ ವ್ಯಕ್ತಿ ಎಂಬ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವುದರ ಸಲುವಾಗಿ ಲಂಕೇಶರ ಕಥೆಗಳಲ್ಲಿ ಬರುವ ಪಾತ್ರಗಳಲ್ಲಿ ಕೆಲವನ್ನು ಆಯ್ದು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ.

ಈ ವಿಶ್ಲೇಷಣೆಯ ಪ್ರಕ್ರಿಯೆಯಲ್ಲಿ ಸಮಾಜದ ಬಹುಮುಖತೆಯನ್ನು ಹೈಲೈಟ್ ಮಾಡಲಾಗಿದೆ. ಲಂಕೇಶರ ಕಥೆಗಳಲ್ಲಿನ ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧಾಂತರಗಳನ್ನು ಸಮಕಾಲೀನ ಸಮಾಜದ ಜೊತೆಗೆ ಮುಖಾಮುಖಿಯಾಗಿಸಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಸಮಕಾಲೀನ ಸಮಾಜದ ಬಹುಮುಖ್ಯ ಅಂಶಗಳಾದ ಅಧಿಕಾರಶಾಹಿವರ್ಗ/ಜಮೀನ್ದಾರಿಪದ್ಧತಿ, ಜಾತಿಪದ್ಧತಿ, ಮಹಿಳೆಯರನ್ನು ನಿಯಂತ್ರಿಸುವ ಪುರುಷ ಪ್ರಧಾನ ಮೌಲ್ಯಗಳು ಹಾಗೂ ನಗರ ಮತ್ತು ಗ್ರಾಮದ ಒಡಂಬಡಿಕೆಗಳನ್ನು ಲಂಕೇಶರ ಕಥೆಗಳ ಮೂಲಕ ವಿಶ್ಲೇಷಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

ಪರಿವರ್ತನೆ ಸಮಾಜದ ನಿಯಮ. ಸಮಾಜದ ಪರಿವರ್ತನೆ ವ್ಯಕ್ತಿಗಳ ವ್ಯಕ್ತಿತ್ವದ ಬದಲಾವಣೆಯಿಂದ ಮಾತ್ರ ಸಾಧ್ಯ ಎಂಬುದನ್ನು ಲಂಕೇಶರ ಕಥೆಗಳಲ್ಲಿ ಕಂಡುಬರುವ

ವ್ಯಕ್ತಿಗಳು ಮತ್ತು ಸಮಾಜ ಸಾಬೀತುಪಡಿಸಿವೆ. "ಹಳೆಬೇರು ಹೊಸ ಚಿಗುರು" ಎಂಬ ಮಾತು ಈ ಸಂಪ್ರಬಂಧದ ಉದ್ದಕ್ಕೂ ವ್ಯಕ್ತವಾಗಿದೆ. ಹಳೆಬೇರು ಸಮಾಜವಾದರೆ, ಹೊಸ ಚಿಗುರು ಸಮಾಜದಲ್ಲಿನ ವ್ಯಕ್ತಿಗಳಲ್ಲಾದ ಕಾಲಕ್ಕೆ ತಕ್ಕ ಬದಲಾವಣೆಗಳಾಗಿವೆ. ಸಮಾಜ ಸ್ಥಿರವಾದದ್ದು ಆದರೆ ವ್ಯಕ್ತಿಗಳು ಚಲನಶೀಲ ಗುಣವುಳ್ಳವರು, ಸಮಾಜವನ್ನು ಹೊಸ ದೃಷ್ಟಿಕೋನಗಳತ್ತ ಕೊಂಡೊಯ್ಯುವರಾಗಿ ಕಾಣಿಸುತ್ತಾರೆ. ಕಥೆಗಳಲ್ಲಿ ಕಂಡುಬರುವ ವ್ಯಕ್ತಿಗಳ ವಿವಿಧ ರೂಪಗಳು ಸೃಷ್ಟಿಸುವ ಹೊಸ ಸಮಾಜವನ್ನು ಹೇಳುವ ಅಂಶಕ್ಕೆ ಈ ಪ್ರಬಂಧದಲ್ಲಿ ಹೆಚ್ಚು ಒತ್ತನ್ನು ನೀಡಲಾಗಿದೆ.

ಮಾನವ ಜೀವನದ ಕೈಗನ್ನಡಿಗಳಾದ ಕಥೆಗಳು ಮಾನವ ಸಂಬಂಧಗಳನ್ನು ಹೇಗೆ ಧ್ವನಿಸುತ್ತವೆ ಎಂಬುದನ್ನು ಹೇಳಲು ಹತ್ತು ಪ್ರಾತಿನಿಧಿಕ ಕಥೆಗಳನ್ನು ತೆಗೆದುಕೊಳ್ಳಲಾಗಿದೆ. ಕಥೆಗಳನ್ನು ವಿಮರ್ಶಿಸುವ ಪ್ರಯತ್ನ ಮಾಡಿ ಕಥೆಗಳ ಫಲಾಫಲಗಳನ್ನು ನೀಡಲಾಗಿದೆ. ವ್ಯಕ್ತಿ ಮತ್ತು ಸಮಾಜದ ಪರಿಕಲ್ಪನೆಗಳ ವಿವಿಧ ವ್ಯಾಖ್ಯಾನಗಳ ಮೇರೆಗೆ ಲಂಕೇಶರ ಕಥೆಗಳಲ್ಲಿ ಕಂಡುಬರುವ ಹೊಸ ಸಮಾಜದ ಕಲ್ಪನೆಯನ್ನು ಮತ್ತು ವ್ಯಕ್ತಿಗಳ ಹಲವು ಹೊಸತನದ ರೂಪಗಳನ್ನು ವಿವರಿಸಲಾಗಿದೆ.

ಲಂಕೇಶರ ಕಥೆಗಳಲ್ಲಿ ಬರುವ ಹಳೆತಲೆಮಾರಿನ ವ್ಯಕ್ತಿಗಳು ಮತ್ತು ಹೊಸ ತಲೆಮಾರಿನ ವ್ಯಕ್ತಿಗಳ ನಡುವಿನ ಸಂಘರ್ಷಗಳು ಸದ್ದುಗದ್ದಲ್ಲವಿಲ್ಲದೆ ನಡೆಯುತ್ತವೆ. ಈ ಎರಡು ಬಗೆಯ ವ್ಯಕ್ತಿಗಳ ತುಡಿತಗಳು, ಆಸೆ-ಆಕಾಂಕ್ಷೆಗಳು ಹೊಸ ಬದುಕಿನ ಕಡೆಗೆ ಎಂಬುದು ವಿಶೇಷವಾದ ಸಂಗತಿಯಾಗಿ ತೋರುತ್ತದೆ. ಕಥೆಗಳಲ್ಲಿ ಬರುವ ಮಲ್ಲಯ್ಯ, ಕೃಷ್ಣಸ್ವಾಮಿ, ದೇವಿ ಚೆಲುವಮ್ಮ ಮುಂತಾದ ಹಳೆತಲೆಮಾರಿನ ವ್ಯಕ್ತಿಗಳೂ ಸಹ ಹೊಸ ಸಮಾಜದ ಕನಸುಗಳ ಸಾಕಾರಕ್ಕೆ ಸಾತು ನೀಡುತ್ತಾರೆ. ಬದಲಾವಣೆಯನ್ನು ಒಪ್ಪಿಕೊಳ್ಳುತ್ತಾರೆ.

ಹಾಗೆಯೇ ಶ್ಯಾಮಲ, ಸ್ಟೆಲ್ಲಾ, ತಿಪ್ಪಣ್ಣ ಉಮಾಪತಿ, ಗೌರಿ, ಪರಮೇಶಿ, ಶಿವರುದ್ರ, ಕೃಷ್ಣೋಜಿ ಮುಂತಾದ ಹೊಸ ತಲೆಮಾರಿನ ವ್ಯಕ್ತಿಗಳು ಆಧುನಿಕತೆಯನ್ನು ಸ್ವೀಕರಿಸಲು ತಯಾರಿರುವ ವ್ಯಕ್ತಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಈ ಎರಡು ತಲೆಮಾರಿನ ವ್ಯಕ್ತಿಗಳು ಸಮಾಜದಲ್ಲಿ ಅಲ್ಲಿಯವರೆಗೂ ಅಸ್ತಿತ್ವದಲ್ಲಿದ್ದ ನಿಯಮಗಳನ್ನು ಗಾಳಿಗೆ ತೂರಿ ಹೊಸ

ನೆಲೆಯನ್ನು ಕಂಡುಕೊಳ್ಳುವ ಹಂಬಲ ವ್ಯಕ್ತಪಡಿಸುವ ರೀತಿಯನ್ನು ಈ ಸಂಪ್ರಬಂಧದಲ್ಲಿ ಗಮನಿಸಲಾಗಿದೆ.

ಜಾತೀಯತೆಯನ್ನು ಕಟ್ಟುನಿಟ್ಟಾಗಿ ಪಾಲಿಸುವ ಸಮಾಜವೂ ಲಂಕೇಶರ ಕಥೆಗಳಲ್ಲಿ ಕಂಡುಬಂದರೂ, ಬಸಲಿಂಗ ಡಾ. ತಿಮ್ಮಪ್ಪನನ್ನು ತಬ್ಬಿಕೊಂಡು ಕಣ್ಣೀರುಡುವಾಗ ಸ್ಪೃಶ್ಯ – ಅಸ್ಪೃಶ್ಯ ಜಗತ್ತಿನ ಮಡಿ–ಮೈಲಿಗೆ ಭಾವನೆಗಳಿಗೆ ತೆರೆಬೀಳುತ್ತದೆ. ಇಂತಹ ಬದಲಾವಣೆಯೂ ಸಮಾಜದಲ್ಲಿ ವ್ಯಕ್ತಿಗಳ ಸಮ್ಮುಖದಲ್ಲಿ ಸಾಗುತ್ತದೆ ಎಂಬುದು ಬಸಲಿಂಗ, ಡಾ. ತಿಮ್ಮಪ್ಪ ಇವರಿಂದ ಕಾಣಬಹುದು.

ಜಮೀನ್ದಾರಿ ಪದ್ಧತಿ ಅಥವಾ ವರ್ಗವ್ಯವಸ್ಥೆಯಲ್ಲಾದ ಪರಿವರ್ತನೆಗಳು ಹೋರಾಟರಹಿತವಾಗಿ ಕಥೆಗಳಲ್ಲಿ ಕಂಗೊಳಿಸುತ್ತವೆ. ಜೀತ ವಿಮೋಚನೆಯ ಸಲುವಾಗಿ ಅಸ್ತಿತ್ವಕ್ಕೆ ಬಂದ ಕಾನೂನು "ಉಳುವವನೆ ಭೂಮಿಗೆ ಒಡೆಯ" ಎಂಬುದು ಈ ಕಾನೂನು ತಂದ ಸಾಮಾಜಿಕ ಬದಲಾವಣೆಯ ಸ್ವರೂಪವನ್ನು ವ್ಯಕ್ತಪಡಿಸುವಂತಹ ಕಥೆ 'ಉಲ್ಲಂಘನೆ', ಜೀತ ವ್ಯವಸ್ಥೆಯಲ್ಲಿ ರೈತನಾಗಿದ್ದ ಭರಮ ಮತ್ತು ಜಮೀನ್ದಾರಿ ಪದ್ಧತಿಯಲ್ಲಿ ಜಮೀನ್ದಾರನಾಗಿ ಕೃಷ್ಣಸ್ವಾಮಿ ಎಲ್ಲಿಯೂ ತಮ್ಮ ನೈತಿಕ ಚೌಕಟ್ಟನ್ನು ಮೀರುವುದಿಲ್ಲ. ಭೂಒಡೆಯ ಇಲ್ಲಿ ಶೋಷಣೆಯ ಪ್ರತೀಕವಾಗಿ ಕಾಣಿಸುವುದಿಲ್ಲ. 'ಉಲ್ಲಂಘನೆ' ಕಥೆಯಲ್ಲಿ ವ್ಯಕ್ತಿಗಳು ನೈತಿಕತೆಯನ್ನು ಮರೆತ ಪ್ರಸಂಗಗಳು ಸಿಗುವುದಿಲ್ಲ. ಈ ಅಂಶಗಳು ಆಧಾರದ ಮೇಲೆ ಲಂಕೇಶರ ಕಥೆಗಳು ಕಟ್ಟುವ ಸಮಾಜ ವ್ಯಕ್ತಿಯ ವಿವಿಧ ರೂಪಗಳು ಪರಿಚಯವನ್ನು ಮಂಡಿಸಲು ಈ ಪ್ರಬಂಧದಲ್ಲಿ ಯತ್ನಿಸಲಾಗಿದೆ.

ಲಂಕೇಶರ ಕಥೆಗಳಲ್ಲಿ ಮಹಿಳೆಯರಿಗೆ ಪ್ರಾಮುಖ್ಯತೆಯನ್ನು ನೀಡುವ ಮೂಲಕ ಹೊಸತನದ ಬದಲಾದ ಛಾಯೆ ಎದ್ದು ಕಾಣುತ್ತದೆ. ಪಿತೃಪ್ರಧಾನ ಮೌಲ್ಯಗಳಿರುವ ಸಮಾಜದಲ್ಲಿ ಲಿಂಗತಾರತಮ್ಯವು ಪ್ರಮುಖವಾಗಿ ಕಂಡುಬರುವಂತಹ ಪಿಡುಗು. ಈ ಪಿಡುಗನ್ನು ಮೀರುವ ಪ್ರಯತ್ನಕ್ಕೆ ಕಥೆಗಳಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಆದರೂ ಈ ಕಥೆಗಳಲ್ಲಿ ಬರುವ ಮಹಿಳಾ ಪಾತ್ರಗಳು ಪಿತೃಪ್ರಧಾನ ಮೌಲ್ಯಗಳ ಚೌಕಟ್ಟಿನ ಒಳಗೆ ರೂಪಿತವಾಗಿವೆ. 'ಉರಿದ ಊರಿನವರು', 'ದೇವಿ', 'ಕಲ್ಲು ಕರಗುವ ಸಮಯ' 'ಸ್ಟೆಲ್ಲಾ

ಎಂಬ ಹುಡುಗಿ', 'ದಾಹ' ಮುಂತಾದ ಕಥೆಗಳಲ್ಲಿ ಬರುವ ವ್ಯಕ್ತಿಗಳು ಪಿತೃಪ್ರಧಾನ ಮೌಲ್ಯಗಳನ್ನು ಧಿಕ್ಕರಿಸುವ ಪ್ರಯತ್ನ ಮಾಡುತ್ತಾರೆ. ಇದರಿಂದ ಆ ವ್ಯಕ್ತಿಗಳು ಕಟ್ಟುವ ಹೊಸ ಸಮಾಜದ ಮಾದರಿಯನ್ನು ಈ ಸಂಪ್ರಬಂಧದಲ್ಲಿ ಅನೇಕ ಸಮಾಜಶಾಸ್ತ್ರೀಯ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಮಂಡಿಸಲಾಗಿದೆ.

ಜಾತಿಪದ್ಧತಿಯನ್ನು ಧಿಕ್ಕರಿಸುವ ಸಮಾಜವು ಲಂಕೇಶರ ಕಥೆಗಳಲ್ಲಿ ವ್ಯಕ್ತವಾಗಿದೆ. ಭಾರತೀಯ ಸಮಾಜದಲ್ಲಿ ಹಾಸುಹೊಕ್ಕಾಗಿರುವ ಜಾತಿಪದ್ಧತಿಯನ್ನು ಗಾಳಿಗೆ ತೂರುವ ಪ್ರಯತ್ನವನ್ನು ಲಂಕೇಶರ ಕಥೆಗಳಲ್ಲಿ ವಿವಿಧ ಪಾತ್ರಗಳು ಹೇಗೆ ನಿರ್ವಹಿಸುತ್ತವೆ ಎಂಬುದನ್ನು ಈ ಪ್ರಬಂಧದಲ್ಲಿ ಹೇಳಲಾಗಿದೆ. 'ಕಲ್ಲು ಕರಗುವ ಸಮಯ', 'ಉಮಾಪತಿಯ ಸ್ಕಾಲರ್‌ಶಿಪ್‌ಯಾತ್ರೆ', 'ಮುಟ್ಟಿಸಿಕೊಂಡವನು' ಮುಂತಾದ ಕಥೆಗಳಲ್ಲಿ ಬರುವ ಪಾತ್ರಗಳು ಹೊಸ ಸಮಾಜದ ಕಟ್ಟುವಿಕೆಯನ್ನು ಯಾವುದೇ ಕ್ರಾಂತಿಕಾರಕ ಹೋರಾಟಗಳಿಲ್ಲದೆ ನಿಭಾಯಿಸುತ್ತಾರೆ. ಈ ಅಂಶವನ್ನು ಈ ಸಂಪ್ರಬಂಧದಲ್ಲಿ ಪಾತ್ರಗಳ ಹಿನ್ನೆಲೆಯಿಟ್ಟುಕೊಂಡು ಹೇಳಿದ್ದಾನೆ.

ಲಂಕೇಶರ ಕಥೆಗಳಲ್ಲಿ ಕಂಡುಬರುವ ಮತ್ತೊಂದು ವಿಶೇಷವೆಂದರೆ ನಗರ ಹಾಗೂ ಗ್ರಾಮದ ಸಮತೋಲನವನ್ನು ಪ್ರತಿಬಿಂಬಿಸುವ ಸಮಾಜ.

ಲಂಕೇಶರ ಬಹುತೇಕ ಕಥೆಗಳು ಗ್ರಾಮೀಣ ಹಿನ್ನೆಲೆಯಲ್ಲಿ ರೂಪುಗೊಂಡಿದ್ದರೂ ಸಹ ನಗರಪ್ರಜ್ಞೆಗೆ ಆಕರ್ಷಿತವಾದ ನಾಯಕರುಗಳು ಕಥೆಗಳಲ್ಲಿ ಕಂಡುಬರುತ್ತಾರೆ. ಹೊಸ ಮೌಲ್ಯಕ್ಕೆ ಸಿಲುಕಿರುವ ವ್ಯಕ್ತಿಗಳು ವಿದ್ಯಾಭ್ಯಾಸದ ನಂತರ ಗ್ರಾಮದ ಬಗ್ಗೆ ಅಸಡ್ಡೆ ತೋರಿದರು ಸಹ ಗ್ರಾಮೀಣ ಮೌಲ್ಯಗಳು ಅವರಲ್ಲಿ ಸದಾ ಜಾಗೃತವಾಗಿರುತ್ತವೆ. ನಗರ ಜೀವನ ನಿಷ್ಠುರತೆ, ಭಾವನಾರಹಿತ ವಾಸ್ತವತೆಯನ್ನು ವ್ಯಕ್ತಪಡಿಸಿದರೆ ಗ್ರಾಮಜೀವನದಲ್ಲಿ ಮಾನವೀಯ ಮೌಲ್ಯಗಳ ಸಾಕಾರಗೊಳ್ಳುವಿಕೆ ಇರುತ್ತದೆ. ಈ ಎರಡು ವಾತಾವರಣಗಳನ್ನು ಸಮತೋಲನದಲ್ಲಿಟ್ಟು ನೋಡುವ ಪ್ರಯತ್ನ ಲಂಕೇಶರ ಕಥೆಗಳಾದ 'ರೊಟ್ಟಿ', 'ಕೆರೆಯ ನೀರನು ಕೆರೆಗೆ ಚೆಲ್ಲಿ' ಮುಂತಾದ ಕಥೆಗಳಲ್ಲಿನ ವಿವಿಧ ಪಾತ್ರಗಳು ನಿರ್ವಹಿಸಿವೆ. ಈ ನೆಲೆಯಲ್ಲಿ ಸಂಪ್ರಬಂಧವು ರಚನೆಗೊಂಡಿದೆ.

ಆಧುನಿಕ ಬದುಕಿನ ವಿವಿಧ ಮಾದರಿಗಳು ಲಂಕೇಶರ ಕಥೆಗಳಲ್ಲಿವೆ. ಪ್ರೀತಿ ಪ್ರೇಮಕ್ಕೆ ಹೊಸದಾರಿಯನ್ನು ತೋರಿಸುವಂತಹ ಪ್ರೇಮಕಥೆಗಳು ಇಲ್ಲಿವೆ. ಜೊತೆಗೆ ವಿದ್ಯಾಭ್ಯಾಸದಿಂದ ಸಮಾಜದ ವ್ಯಕ್ತಿಗಳು ಹೇಗೆ ಪರಿವರ್ತನೆಗೊಳ್ಳುವರು ಎಂಬುದರ ಬಗ್ಗೆ ಈ ಸಂಪ್ರಬಂಧದಲ್ಲಿ ಮಾಹಿತಿಗಳನ್ನು ನೀಡಲಾಗಿದೆ. ಆಧುನಿಕ ಬದುಕಿನ ಜಂಜಾಟಗಳು, ಸಂದಿಗ್ಧ ಪರಿಸ್ಥಿತಿಗಳು ಹೇಗಿರುತ್ತವೆ ಎಂಬುದನ್ನು ಇಲ್ಲಿ ಹೇಳುವ ಪ್ರಯತ್ನ ಮಾಡಲಾಗಿದೆ.

ಸಾಂಪ್ರದಾಯಿಕ ಬದುಕು ಹಾಗು ಆಧುನಿಕ ಬದುಕು ಹೇಗೆ ವಿಭಿನ್ನವಾದ ವ್ಯಕ್ತಿತ್ವದ ಮನಸ್ಸುಗಳನ್ನು ಹುಟ್ಟುಹಾಕುತ್ತದೆ. ಅಭಿಪ್ರಾಯಗಳಲ್ಲಿ ಹೇಗೆ ಭಿನ್ನತೆ ಹುಟ್ಟುತ್ತದೆ ಎಂಬುದರ ಬಗ್ಗೆ ಆಲೋಚಿಸಲಾಗಿದೆ.

ನವ್ಯ ಬರಹಗಾರರಲ್ಲಿ ಪ್ರಬಲವಾಗಿ ಕಂಡುಬಂದ ಅಸ್ತಿತ್ವವಾದದ ಪ್ರಭಾವ ಲಂಕೇಶರ ಕಥೆಗಳಲ್ಲೂ ದಟ್ಟವಾಗಿ ಆಗಿದೆ. ವ್ಯಕ್ತಿಯ ಇರುವಿಕೆಗೆ ವ್ಯಕ್ತಿಯೇ ಕಾರಣ ಹೊರತು ಸಮಾಜವಲ್ಲ ವ್ಯಕ್ತಿಗಳು ಬದಲಾದ ಮೇಲೆ ಸಮಾಜ ಬದಲಾಗುತ್ತದೆ ಎಂಬುದು ಲಂಕೇಶರ ಕಥೆಗಳಲ್ಲಿ ಬರುವ ವಿವಿಧ ಪಾತ್ರಗಳು ಸ್ಪಷ್ಟಪಡಿಸುತ್ತವೆ. ವ್ಯಕ್ತಿ ಮತ್ತು ಸಮಾಜದ ಬದಲಾವಣೆಗೆ ಹೆಣ್ಣು ಮತ್ತು ಗಂಡು ಇಬ್ಬರು ಪರಿಣಾಮಕಾರಿಯಾಗಿ ಪಾಲ್ಗೊಳ್ಳಬೇಕು ಎನ್ನುವುದನ್ನು ಲಂಕೇಶರ ಕಥೆಗಳು ನಿರ್ದೇಶಿಸುತ್ತವೆ.

ಒಟ್ಟಾರೆಯಾಗಿ ಪರಿವರ್ತನಾಶೀಲ ಸಮಾಜಕ್ಕೆ ಬೇಕಾದ ವಿವಿಧ ರೂಪಗಳಿರುವ ವ್ಯಕ್ತಿಗಳ ವ್ಯಕ್ತಿತ್ವಗಳನ್ನು ಲಂಕೇಶರ ಹಲವು ಕಥೆಗಳ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ. ಕಥೆಗಳಲ್ಲಿ ಹಲವು ರೂಪದ ವ್ಯಕ್ತಿಗಳಾಗಿ ಮೇಲ್ಜಾತಿಯವರು, ಕೆಳಜಾತಿಯವರು, ಮಹಿಳೆಯರು, ಜಮೀನ್ದಾರರು, ರೈತರು, ವೃದ್ಧರು, ತರುಣರು, ವಿದ್ಯಾವಂತರು, ಅವಿದ್ಯಾವಂತರು ಮುಂತಾದವರು ಕಂಡುಬರುತ್ತಾರೆ. ಇವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಸಮಾಜದ ಮೌಲ್ಯಗಳಿಗೆ ಅಂಟಿಕೊಂಡವರಾದರೂ, ಬದಲಾವಣೆಯ ಪ್ರಕ್ರಿಯೆಗೆ ಸಿಲುಕಿದವರು. ಇವರೆಲ್ಲರಲ್ಲೂ ಮಾನವೀಯ ಮೌಲ್ಯಗಳ ಛಾಯೆ ಇದೆ. ಹೊಸತು–ಹಳತುಗಳ ನಡುವಿನ ವೈರುಧ್ಯಗಳಿವೆ. ಬದುಕಿನ ಬಗ್ಗೆ ಮರುಚಿಂತನೆಗಳಿವೆ. ಇವುಗಳೆಲ್ಲಾ ತಾವು ಬದುಕಿರುವ ಸಮಾಜದ ವ್ಯಾಪ್ತಿಯಲ್ಲಿದೆ. ಈ ಅಂಶಗಳ ಹಿನ್ನೆಲೆಯಲ್ಲಿ ಹೊಸ ಆಸೆ–ಆಕಾಂಕ್ಷೆಗಳ ಸ್ವೀಕಾರ ನಡೆದಾಗ ಹೊಸ ಸಮಾಜದ ಸೃಷ್ಟಿಯಾಗುತ್ತದೆ

ಎಂಬುದನ್ನು ಸಂಪ್ರಬಂಧದಲ್ಲಿ ವಿವರಿಸಲಾಗಿದೆ. ಒಟ್ಟಾರೆ ಹೇಳುವುದಾದರೆ ಲಂಕೇಶರ ಕಥೆಗಳ ಮೇಲೆ ಅಸ್ತಿತ್ವವಾದದ ದಟ್ಟ ಪ್ರಭಾವವಿದೆ. ಸಮಕಾಲೀನ ಸಮಾಜದ ವಿವಿಧ ರೂಪಗಳು ಈ ಕಥೆಗಳಲ್ಲಿ ಕಂಡುಬರುತ್ತವೆ ಎಂದು ಹೇಳಬಹುದು.

ಲಂಕೇಶರ ಕಥೆಗಳಲ್ಲಿನ ವ್ಯಕ್ತಿ ಮತ್ತು ಸಮಾಜದ ಸಂಬಂಧಾಂತರಗಳು ಸಮಕಾಲೀನ ಸಾಮಾಜಿಕ ವೈರುಧ್ಯಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಅನುವು ಮಾಡಿಕೊಡುತ್ತವೆ. ಹತ್ತು ಹಲವು ರೀತಿಯ ತಾರತಮ್ಯಗಳನ್ನೊಳಗೊಂಡ ಸಮಕಾಲೀನ ಸಾಮಾಜಿಕ ಸಂದರ್ಭದಲ್ಲಿ ಲಂಕೇಶರ ಕಥೆಗಳು, ಆ ಕಥೆಗಳಲ್ಲಿನ ವ್ಯಕ್ತಿಗಳು ಹಾಗೂ ಈ ವ್ಯಕ್ತಿಗಳನ್ನೊಳಗೊಂಡ ಕಥೆಗಳು ಕಟ್ಟುವ ಸಮಾಜದ ಕುರಿತ ಅಧ್ಯಯನವು ಕೇವಲ ಕಥೆಗಳನ್ನಷ್ಟೇ ಅಲ್ಲ, ಕಥೆಗಳ ಸಮಕಾಲೀನತೆಯನ್ನು ಹಾಗೂ ಸಮಕಾಲೀನತೆಯ ಕಥೆಗಳನ್ನು ವಿಶಿಷ್ಟವಾಗಿ ಕಟ್ಟುವ ಪ್ರಯತ್ನವನ್ನು ಮಾಡಿದೆ.

# ಗ್ರಂಥಸೂಚಿ


"ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ" : ಅಮೂರ, ಜಿ.ಎಸ್.,
ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು (೨೦೦೩),
ಪು.೨೪೭–೨೭೪.

"ಕಲ್ಲು ಕರಗುವ ಸಮಯ ಮತ್ತು ಇತರ ಕಥೆಗಳು" : ಲಂಕೇಶ್, ಪಿ., ,
ಲಂಕೇಶ್ ಪ್ರಕಾಶನ, ಬಸವನಗುಡಿ,
ಬೆಂಗಳೂರು (೨೦೦೭).

"ಸಾಹಿತ್ಯ ಸಂಸ್ಕೃತಿ" : ನರಹಳ್ಳಿ ಬಾಲಸುಬ್ರಮಣ್ಯ,
ಅಂಕಿತ ಪುಸ್ತಕ ಪ್ರಕಾಶನ, ಬಸವನಗುಡಿ,
ಬೆಂಗಳೂರು (೧೯೯೮).

"ಲಂಕೇಶರ ಕಥನ ಸಾಹಿತ್ಯದಲ್ಲಿ ಗ್ರಾಮ ಸಮಾಜ" : ವೆಂಕಟೇಶ್, ಸಿ.,
ಕನ್ನಡ ಸಂಘ, ಕ್ರೈಸ್ಟ್ ಕಾಲೇಜು ಪ್ರಕಾಶನ,
ಬೆಂಗಳೂರು (೧೯೯೮).

"ಅಸ್ತಿತ್ವವಾದ" : ತಿರುಮಲೇಶ್, ಕೆ.ವಿ.,
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಾಶನ,
ನೃಪತುಂಗ ರಸ್ತೆ, ಬೆಂಗಳೂರು (೧೯೯೯).

"ಕಥೆ–ಕಥನ" : ಪ್ರಸಾದಸ್ವಾಮಿ, ಎಸ್.,
ಧಾತ್ರಿ ಪುಸ್ತಕ ಪ್ರಕಾಶನ, ನಾಗರಬಾವಿ ೨ನೇ
ಹಂತ, ಬೆಂಗಳೂರು (೨೦೦೭).

"ಡಿ.ಆರ್. ನಾಗರಾಜ್ ಸಂಸ್ಕೃತಿ ಕಥನ" : ಅಗ್ರಹಾರ ಕೃಷ್ಣಮೂರ್ತಿ (ಸಂ.),
ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ
ಪ್ರಕಾಶನ, ಬೆಂಗಳೂರು (೨೦೦೨).

"ಶತಮಾನದ ಸಣ್ಣಕಥೆಗಳು" : ದಿವಾಕರ್, ಆರ್.,
ಪ್ರಿಸಂ ಬುಕ್ಸ್ ಪ್ರಕಾಶನ, ಬೆಂಗಳೂರು (೧೯೯೭).

"ಹೊಸಗನ್ನಡ ಸಾಹಿತ್ಯ ಚರಿತ್ರೆ" : ಶೇಷಗಿರಿರಾವ್, ಎಲ್.ಎಸ್.,
ಅಂಕಿತ ಪುಸ್ತಕ ಪ್ರಕಾಶನ,
ಬಸವನಗುಡಿ, ಬೆಂಗಳೂರು (೨೦೦೨),

"ಶೈಕ್ಷಣಿಕ ಮನೋವಿಜ್ಞಾನ" : ಹಂಪಿಹೊಳಿ, ವಿ.ಕೆ.,
ವಿಜಯ ಪ್ರಕಾಶನ, ಗದಗ (೨೦೦೪).

"Encyclopaedia Britannica" : Vol.10, The University of Chicago Publications (1768).

"ಕನ್ನಡ ವಿಶ್ವಕೋಶ" : ತಿಪ್ಪೇರುದ್ರಸ್ವಾಮಿ, ಎಚ್.
(ಪ್ರಧಾನ ಸಂಪಾದಕರು), ಸಂಪುಟ–೧೨,
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾಲಯ,
ಮೈಸೂರು (೧೯೮೬).

"ಭಾರತೀಯ ಸಮಾಜ" : ಶಂಕರ್‌ರಾವ್, ಚ.ನ.,
ಜೈ ಭಾರತ್ ಪ್ರಕಾಶನ,
ಮಂಗಳೂರು (೨೦೦೫).

"The Reader's Companion to World Literature" : Calvin's Brown (ed.),
Amentor Book, New American Library,
New York (1984).

"ಉಮಾಪತಿಯ ಸ್ಕಾಲರ್‌ಶಿಫ್ ಯಾತ್ರೆ ಮತ್ತು ಇತರ ಕಥೆಗಳು" : ಲಂಕೇಶ್, ಪಿ.,
ಲಂಕೇಶ್ ಪ್ರಕಾಶನ, ಬಸವನಗುಡಿ,
ಬೆಂಗಳೂರು (೧೯೯೬).

"ಕೆರೆಯ ನೀರನು ಕೆರೆಗೆ ಚೆಲ್ಲಿ ಮತ್ತು ಇತರ ಕಥೆಗಳು" : ಲಂಕೇಶ್, ಪಿ., ಲಂಕೇಶ್ ಪ್ರಕಾಶನ,
ಬಸವನಗುಡಿ,
ಬೆಂಗಳೂರು (೨೦೦೬).

"ಪಿ. ಲಂಕೇಶ್ ಅವರ ಆಯ್ದ ಕಥೆಗಳು" : ಲಂಕೇಶ್, ಪಿ.,
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ),
ಕರ್ನಾಟಕ (೨೦೦೬).

"ಶತಮಾನದ ಸಾಹಿತ್ಯ ವಿಮರ್ಶೆ" ಪ್ರೊ. ಎಸ್. ರಾಘವೇಂದ್ರರಾವ್
ಕನ್ನಡ ಭವನ ಪ್ರಕಾಶನ,
ಬೆಂಗಳೂರು, ೨೦೦೧.

"ಸಂಸ್ಕಾರ" : ಅನಂತಮೂರ್ತಿ, ಯು.ಆರ್.
ಡೆಲ್ಲಿ ಪಬ್ಲಿಕೇಶನ್,
ನವದೆಹಲಿ, ೧೯೭೯.

"ನವ್ಯ ಸಾಹಿತ್ಯ ದರ್ಶನ" : ಶಾಂತಿನಾಥ ದೇಸಾಯಿ,
ಪರಿಸರ ಸಾಹಿತ್ಯ ಪ್ರಕಾಶನ,
ಶಿವಮೊಗ್ಗ (೧೯೯೦).

"ನಾನಲ್ಲ ಮತ್ತು ಇತರ ಕಥೆಗಳು" : ಲಂಕೇಶ್, ಪಿ.,
ಲಂಕೇಶ್ ಪ್ರಕಾಶನ,
ಬಸವನಗುಡಿ, ಬೆಂಗಳೂರು (೨೦೦೨).

